# ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆ

(ಕನ್ನಡ ವಿಶ್ವವಿದ್ಯಾಲಯ ಹಂಪಿ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ
ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)


ಸಂಶೋಧನ ವಿದ್ಯಾರ್ಥಿ
ಶ್ರೀಮತಿ ಗಂಗೂಬಾಯಿ ಎ. ಪವಾರ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩ ೨೭೬

ಮಾರ್ಗದರ್ಶಕರು
ಡಾ. ಎಂ ಮಲ್ಲಿಕಾರ್ಜುನಗೌಡ
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩ ೨೭೬





ಭಾಷಾ ನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೫-೧೬

# ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆ

(ಕನ್ನಡ ವಿಶ್ವವಿದ್ಯಾಲಯ ಹಂಪಿ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ
ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)

ಸಂಶೋಧನ ವಿದ್ಯಾರ್ಥಿ

**ಶ್ರೀಮತಿ ಗಂಗೂಬಾಯಿ ಎ. ಪವಾರ**

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩ ೨೭೬



ಮಾರ್ಗದರ್ಶಕರು

**ಡಾ. ಎಂ ಮಲ್ಲಿಕಾರ್ಜುನಗೌಡ**

ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩ ೨೭೬



**ಭಾಷಾ ನಿಕಾಯ**

**ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ವಿದ್ಯಾರಣ್ಯ-೫೮೩ ೨೭೬**

**೨೦೧೫-೧೬**

# ಮಾರ್ಗದರ್ಶಕರ ಪ್ರಮಾಣ ಪತ್ರ

ಗಂಗೂಬಾಯಿ ಅ. ಪವಾರ ಅವರು ನನ್ನ ಮಾರ್ಗದರ್ಶನದಲ್ಲಿ ಎಂ. ಫಿಲ್, ಪದವಿಗಾಗಿ ಸಂಶೋಧನೆಯನ್ನು ಕೈಗೊಂಡು ಕನ್ನಡ ವಿಶ್ವವಿದ್ಯಾಲಯಕ್ಕೆ ಬರೆದು ಸಾದರ ಪಡಿಸಿದ **"ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆ"** ಎಂಬ ಇಡಿಯಾಗಿ ಇಲ್ಲವೆ ಬಿಡಿಯಾಗಿ ಇಲ್ಲಿಯವರೆಗೆ ಎಲ್ಲಿಯೂ ಪ್ರಕಟಗೊಂಡಿಲ್ಲವೆಂದು ಈ ಪ್ರಮಾಣ ಪತ್ರದ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ದಿನಾಂಕ : 20/07/16

ಸ್ಥಳ : ವಿದ್ಯಾರಣ್ಯ

**ಡಾ. ಎಂ. ಮಲ್ಲಿಕಾರ್ಜುನಗೌಡ**
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ

# ಸಂಶೋಧಕರ ಪ್ರಮಾಣ ಪತ್ರ

"ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆ" ಎಂಬ ಸಂಪ್ರಬಂಧವನ್ನು ಡಾ. ಎಂ. ಮಲ್ಲಿಕಾರ್ಜುನಗೌಡ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ. ಫಿಲ್ ಪದವಿಗಾಗಿ ಭಾಷಾನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 29/07/16

ಸ್ಥಳ : ವಿದ್ಯಾರಣ್ಯ

(ಗಂಗೂಬಾಯಿ ಅ. ಪವಾರ)
ಸಂಶೋಧಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ

# ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆ
# ಒಂದು ಅಧ್ಯಯನ

* ಜಗದ್ಗುರು ತೋಂಟದಾರ್ಯ ಮಠದ

  ಲಿಂಗಾಯತ ಅಧ್ಯಯನ ಸಂಸ್ಥೆ (ಡಾ. ಎಂ.ಎಂ. ಕಲಬುರ್ಗಿ)

**ಅಧ್ಯಾಯ : ನಾಲ್ಕು**

**ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆ**

* ವಚನ ಸಂಪಾದನೆಯ ಕೃತಿಗಳು
* ಬಸವಸ್ತೋತ್ರದ ವಚನಗಳು
* ಬಸವಣ್ಣನವರ ಟೀಕಿನ ವಚನಗಳು ಸಂಪುಟ 1
* ಚನ್ನಬಸವಣ್ಣನವರ ಷಟಸ್ಥಲ ವಚನ ಮಹಾಸಂಪುಟ
* ವಚನ ಶಾಸ್ತ್ರಸಾರ
* ಬಸವಣ್ಣನವರ ವಚನ ಸಂಪುಟ
* ಸಂಕೀಣ ವಚನ ಸಂಪುಟ
* ಏಕೋತ್ತರ ಶತಸ್ಥಲ
* ವಚನ

**ಅಧ್ಯಾಯ - ಐದು**

**ವಚನ ಸಾಹಿತ್ಯ ಸಂಪಾದನೆಗೆ ಡಾ. ಎಂ.ಎಂ. ಕಲಬುರ್ಗಿಯವರ ಕೊಡುಗೆ**

* ಡಾ. ಕಲಬುರ್ಗಿಯವರ ಯೋಜನೆಗಳು
* ಸಮಗ್ರ ವಚನ ಸಾಹಿತ್ಯದ ಜನಪ್ರೀಯ ಆವೃತ್ತಿ

  (ಬೈಬಲ್ ಮಾದರಿ)

**ಅಧ್ಯಾಯ- ಆರು**

**ಸಮಾರೋಪ**

**ಅನುಬಂಧ - ಒಂದು**

* ಡಾ. ಎಂ.ಎಂ. ಕಲಬುರ್ಗಿಯವರ ಜೀವನದ ಪ್ರಮುಖ ಘಟ್ಟಗಳು
* ಡಾ. ಎಂ.ಎಂ. ಕಲಬುರ್ಗಿಯವರ ಕೃತಿಗಳು- ಕೃತಿ ಸೂಚಿ
* ಡಾ. ಎಂ.ಎಂ. ಕಲಬುರ್ಗಿಯವರಿಗೆ ಲಭಿಸಿದ ಪ್ರಶಸ್ತಿಗಳು

**ಅನುಬಂಧ- ಎರಡು**

* ಗ್ರಂಥ ಋಣ

# ಅಧ್ಯಾಯ – ಒಂದು

## ಅಧ್ಯಯನದ ಉದ್ದೇಶ ಮತ್ತು ಸ್ವರೂಪ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ಹಾಗೂ ಸ್ವರೂಪ

ಪೀಠಿಕೆ :

ಕನ್ನಡ ಸಾಂಸ್ಕೃತಿಕ ಕ್ಷೇತ್ರದಲ್ಲಿ ಡಾ. ಎಂ.ಎಂ. ಕಲಬುರ್ಗಿಯವರು ಒಬ್ಬ ಶ್ರೇಷ್ಠ ಅಧ್ಯಾಪಕರಾಗಿ ಸತ್ಯಪ್ರತಿಪಾದನೆಯ ಸಂಶೋಧಕರಾಗಿ; ಪ್ರಾಚೀನ ಕಾವ್ಯ ಚಿಂತನೆಗಳ ಪ್ರಖರ ವಕ್ತಾರರಾಗಿ; ದ್ರಾವಿಡ ಸಂಸ್ಕೃತಿಗಳ ಅಧ್ಯಯನಗಳ ಅನ್ವೇಷಕರಾಗಿ ಸಮರ್ಥ ಆಡಳಿತಗಾರರಾಗಿ; ದುಡಿಯುವ ಕೈಗಳನ್ನು ಬಳಸಿಕೊಂಡು ಕನ್ನಡ ನಾಡನ್ನು ಅಭಿವೃದ್ದಿಯತ್ತ ಸಾಗಿಸಿದ ಮಹಾನ್ ಸಾಧಕರು. ನೂರಾರು ಗ್ರಂಥ ಪ್ರಕಟಣೆಗಳ ಸಲಹಾ ಸಮಿತಿಯ ಸದಸ್ಯರಾಗಿ; ಕನ್ನಡ ಸಾಹಿತ್ಯ ಪ್ರಕಟಣೆಯ ಸಂಪಾದಕರಾಗಿ; ಕರ್ನಾಟಕದ ನಾಡು ನುಡಿ ಜನಾಂಗಕ್ಕೆ ಅವಿರತವಾಗಿ ಪರಿಶ್ರಮಿಸಿ ಸರಕಾರದಿಂದ ಹತ್ತೆಂಟು ಕ್ರಿಯಾಯೋಜನೆಗಳನ್ನು ಕಾರ್ಯಗತಗೊಳಿಸಲು ಸಂಘಟಿಸುವುದು ಅವುಗಳನ್ನು ಪ್ರಕಟಿಸುವುದು ಅವರ ಮೂಲ ಉದ್ದೇಶವಾಗಿತ್ತು. ಕರ್ನಾಟಕದ ಅತ್ಯಂತ ಶ್ರೇಷ್ಠ ಸಾಹಿತ್ಯ ಪ್ರಕಾರವಾದ ವಚನಸಾಹಿತ್ಯ ಸಂಪುಟಗಳ ಪ್ರಧಾನ ಸಂಪಾದಕರಾಗಿ, ಕೀರ್ತನಸಾಹಿತ್ಯ ಸಂಪುಟಗಳ ಪ್ರಕಟಣೆಗಳ ಸಲಹಾ ಸದಸ್ಯರಾಗಿ; ಗದುಗಿನ ತೋಂಟದಾರ್ಯಮಠದ ಲಿಂಗಾಯತ ಅಧ್ಯಯನ ಸಂಸ್ಥೆಯ ಆಧಾರ ಸ್ವರೂಪದ ಕ್ರಿಯಾಶಕ್ತಿಯಾಗಿ ದುಡಿದವರು ಡಾ. ಎಂ.ಎಂ. ಕಲಬುರ್ಗಿಯವರು. ಗದುಗಿನ ವೀರಶೈವ ಪುಣ್ಯ ಪುರುಷ ಮಾಲಿಕೆಯ ರೂವಾರಿಗಳಾಗಿ, ಹತ್ತಾರು ಸಾಹಿತ್ಯ ಸಂಸ್ಥೆ, ಶಿಕ್ಷಣ ಸಂಸ್ಥೆ, ಅಧ್ಯಯನ ಕೇಂದ್ರ, ಹಾಗೂ ಸಂಶೋಧನಾ ಕೇಂದ್ರಗಳ ಸ್ಥಾಪನೆಗೆ ಕಾರಣರಾದವರು ಡಾ. ಎಂ.ಎಂ. ಕಲಬುರ್ಗಿಯವರು. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಪ್ರಾಧ್ಯಾಪಕರಾಗಿ ಸೇರಿದ ಕಲಬುರ್ಗಿಯವರು ವಚನ ವಾಙ್ಮಯ ಸಂಶೋಧನಾ ವಿಭಾಗದ ಸಹಾಯಕ ಸಂಶೋಧಕರಾಗಿ ಪ್ರಾರಂಭಗೊಂಡ ಅವರ ವಚನ ಸಾಹಿತ್ಯ ಸಂಪಾದನಾ ಕಾರ್ಯವು ಕನ್ನಡ ಸಾಹಿತ್ಯದ ವಚನ ಸಾಹಿತ್ಯ ಪ್ರಕಟಣೆಯ ಇತಿಹಾಸದಲ್ಲಿ ಅತ್ಯಂತ ಮಹತ್ವದ ದಾಖಲಾಗಿ ನಿರ್ಮಾಣವಾದದು;

ಇಂದಿನ ಸಾಹಿತ್ಯ ಪ್ರಕಟಣೆಯ ಅತ್ಯಂತ ಮಹತ್ವದ ದಾಖಲಾಗಿದೆ. ಇಂತಹ ಬಹುಮುಖ ವ್ಯಕ್ತಿತ್ವದ ಡಾ. ಎಂ.ಎಂ. ಕಲಬುರ್ಗಿಯವರನ್ನು ಕುರಿತಾದ ಅರ್ಥಪೂರ್ಣ ಬದುಕನ್ನು ಹಾಗೂ ಅವರ ವಚನ ಸಾಹಿತ್ಯ ಸಂಪಾದನೆಯ ವಿಷಯವನ್ನು ಕುರಿತು ಸಂಪ್ರಬಂಧವನ್ನು ಸಿದ್ದಪಡಿಸಲಾಗಿದೆ.

## ಅಧ್ಯಯನದ ಉದ್ದೇಶ :

ಕರ್ನಾಟಕದ ಪ್ರಾಚೀನ ಸಾಹಿತ್ಯ ಸಂಪಾದನೆಗಳಲ್ಲಿ ವಚನ ಸಾಹಿತ್ಯ ಸಂಪಾದನೆಗೆ ವಿಶೇಷ ಸ್ಥಾನವಿದೆ. 19ನೇ ಶತಮಾನದ ಪ್ರಾರಂಭದ ಘಟ್ಟದಲ್ಲಿ ಬ್ರಿಟಿಷರ ಕೊಡುಗೆಯಾಗಿ ಬಂದ ಅನೇಕ ಆವಿಷ್ಕಾರಗಳಲ್ಲಿ ಮುದ್ರಣ ಪ್ರವೇಶ ಅಕ್ಷರ ಲೋಕದಲ್ಲಿ ವಿನೂತನ ಬದಲಾವಣೆಯನ್ನು ತಂದುಕೊಟ್ಟಿತು.

ಶಾಸನಗಳಲ್ಲಿ; ಹಸ್ತಪ್ರತಿಗಳಲ್ಲಿ ; ಕಡತಗಳಲ್ಲಿ ರೂಪಗೊಂಡ ವಿಶೇಷ ಸಾಹಿತ್ಯವನ್ನು ಪ್ರಕಟಿಸುವ ಕಾರ್ಯವು ನಡೆದುಕೊಂಡು ಬಂದಿತು. ಪಾದ್ರಿಗಳು ತಮ್ಮ ಕ್ರೈಸ್ತ ಧರ್ಮದ ಪ್ರಸಾರಕ್ಕಾಗಿ ಚರ್ಚುಗಳ ಮುಖಾಂತರ ಕ್ರೈಸ್ತ ಧರ್ಮದ ತತ್ವಗಳನ್ನು ಪ್ರಕಟಿಸಿ ಪ್ರಚಾರಗೊಳಿಸತೊಡಗಿದರು. ಇದನ್ನು ಅರಿತ ಕನ್ನಡದ ದೇಶೀಯ ವಿದ್ವಾಂಸರು ಪ್ರಾಚೀನ ಧರ್ಮಗಳಾದ ಜೈನ, ವೀರಶೈವ, ಬ್ರಾಹ್ಮಣ, ವಿದ್ವಾಂಸರು ತಮ್ಮ ತಮ್ಮ ಧರ್ಮಗ್ರಂಥಗಳ ಪ್ರಕಟನೆಗೆ ಮುಂದಾದರು. ಈ ಹಿನ್ನಲೆಯಲ್ಲಿ ವೀರಶೈವ ಧರ್ಮದ ಪ್ರಮುಖ ಸಾಹಿತ್ಯವಾದ ವಚನಗಳ ಪ್ರಕಟನೆಗೆ ಫ.ಗು. ಹಳಕಟ್ಟಿ0ಯವರು ಕೆಲವು ವಿದ್ವಾಂಸರು ಮುಂದಾದರು. ಕನ್ನಡದ ವಿಶಿಷ್ಟ ಸಾಹಿತ್ಯ ಪ್ರಕಾರವಾದ ವಚನಗಳ ಮುದ್ರಣಕ್ಕೆ ಹಲವರು ಪ್ರಯತ್ನಿಸಿದರು. ಅಂಥವರಲ್ಲಿ ಡಾ. ಫ. ಗು. ಹಳಕಟ್ಟಿ, ಪ್ರೊ. ಶಿ. ಶಿ. ಬಸವನಾಳ, ಡಾ. ಆರ್.ಸಿ. ಹಿರೇಮಠ ಹಾಗೂ ಡಾ. ಎಂ.ಎಂ. ಕಲಬುರ್ಗಿಯವರು ಪ್ರಮುಖರು.

ಈ ಪ್ರಬಂಧದಲ್ಲಿ ಪ್ರಮುಖವಾಗಿ ಡಾ. ಎಂಎಂ. ಕಲಬುರ್ಗಿಯವರ ವಚನ ಸಂಪಾದನೆಗೆ ಸಂಬಂಧಪಟ್ಟ ವಿಷಯಗಳನ್ನು ಪ್ರಧಾನವಾಗಿ ಇಟ್ಟುಕೊಂಡು ಸಂಪಾದನೆ, ಸಂಸ್ಕರಣೆ, ಪರಿಷ್ಕರಣ ಇವುಗಳ ಮೂಲಕ ವಚನ ಸಾಹಿತ್ಯ ಸಂಪಾದನೆಗೆ ಡಾ. ಕಲಬುರ್ಗಿಯವರು ಬಳಸಿಕೊಂಡ ಹಸ್ತ ಪ್ರತಿಗಳು ಸಂಸ್ಥೆಗಳ ಸಂಗ್ರಹಗಳು ಹಾಗೂ ಅವುಗಳನ್ನು ವ್ಯವಸ್ಥಿತವಾಗಿ ಪ್ರಕಟಿಸುವ ಯೋಜನೆಗಳನ್ನು ದಾಖಲಿಸುವುದು ಈ ಅಧ್ಯಯನದ ಪ್ರಮುಖ ಉದ್ದೇಶ.

* ಕರ್ನಾಟಕದ ವಚನ ಚಳುವಳಿಯ ಪ್ರಾರಂಭಿಕ ವಚನಕಾರರಿಂದ ಮೊದಲುಗೊಂಡು 15ನೆಯ ಶತಮಾನದ ವಚನಕಾರರ ವಚನಗಳ ವಚನ ಸಂಪುಟಗಳನ್ನು ಪರಿಚಯಿಸುವುದು.
* ವಚನ ಸಂಪಾದನೆಯ ಸಂಪುಟಗಳ ವೈಶಿಷ್ಟತೆಯನ್ನು ಹಾಗೂ ಪ್ರಾಮುಖ್ಯತೆಯನ್ನು ದಾಖಲಿಸುವ ಉದ್ದೇಶ ಇದರಲ್ಲಿ ಅಡಗಿದೆ.
* ವಚನಕಾರರ ವಚನಗಳ ಸಂಪುಟಗಳಲ್ಲಿ ಪ್ರಕಟವಾದ ವಚನಗಳ ಅಂಕಿ ಸಂಖ್ಯೆಗಳನ್ನು ದಾಖಲಿಕರಿಸುವುದು.

* ವಚನ ಸಾಹಿತ್ಯ ಸಂಪಾದನೆಯ ಕಾರ್ಯದಲ್ಲಿ ಡಾ. ಎಂ.ಎಂ. ಕಲಬುರ್ಗಿಯವರು ಮಾಡಿದ ಸಾಧನೆಗಳನ್ನು ಐತಿಹಾಸಿಕವಾಗಿ ಗುರುತಿಸುವುದು.
* ರಾಜ್ಯ ಹಾಗೂ ರಾಷ್ಟ್ರ ಸರ್ಕಾರಗಳ ಮತ್ತು ಸಾಂಗಿಕ ಸಂಸ್ಥೆಗಳ ಮೂಲಕ ವಚನಗಳನ್ನು ಪ್ರಕಟಿಸುವಲ್ಲಿ ಡಾ. ಕಲಬುರ್ಗಿಯವರ ಕಾರ್ಯದಕ್ಷತೆಯನ್ನು ಮತ್ತು ಅದರ ಪರಿಣಾಮಗಳನ್ನು ಗುರುತಿಸುವುದು.

## ಅಧ್ಯಯನದ ವಿಧಾನ

ವಚನ ಸಂಪಾದನೆ ಪ್ರಕಟನೆಯು ಪ್ರಾರಂಭಗೊಂಡ ಬಗೆಯನ್ನು ಪ್ರಾದೇಶಿಕ ( ಬಿಜಾಪೂರ, ಧಾರವಾಡ, ಗದಗ, ಬೆಂಗಳೂರು) ಪ್ರಾಂತ್ಯಗಳಲ್ಲಿ ವಿವಿಧ ಸಂಸ್ಥೆಗಳು ಪ್ರಕಟಿಸಿದ ಗ್ರಂಥಗಳನ್ನು ಸಂಗ್ರಹ ಮಾಡಿಕೊಳ್ಳುವುದು , ಸಂಗ್ರಹಿತ ವಿಷಯವನ್ನು ಕಾಲಘಟ್ಟದ ಹಿನ್ನಲೆಯಲ್ಲಿ ವಿಭಾಗ ಕ್ರಮವನ್ನು ಗುರುತಿಸುವುದು. ಐತಿಹಾಸಿಕವಾಗಿ ದಾಖಲವಾದ ಪ್ರಮುಖ ಯೋಜನೆಗಳನ್ನು ಹೆಸರಿಸುವುದು, ಕರ್ನಾಟಕ ಸಂಸ್ಕೃತಿ ಇಲಾಖೆ ಬಿಜಾಪುರ ಶಿವಾನುಭವ ಸಂಸ್ಥೆ ಕರ್ನಾಟಕ ವಿ.ವಿ. ಕನ್ನಡ ಅಧ್ಯಯ ಸಂಸ್ಥೆ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರಿನ ಬಸವ ಸಮಿತಿಯ ವಚನ ವಾಙ್ಮಯ ಯೋಜನೆ ವಚನ ಸಂಪುಟಗಳ ಸಂಗ್ರಹಣೆಯ ಹಿನ್ನಲೆಯಲ್ಲಿ ವಿವರಣಾತ್ಮಕವಾದ ಅಧ್ಯಯನವನ್ನು ನಿರೂಪಿಸಲಾಗಿದೆ. ಡಾ. ಎಂ.ಎಂ. ಕಲಬುರ್ಗಿಯವರ ಒಡನಾಡಿಗಳು ಸಹವರ್ತಿಗಳು ವಿಶೇಷ ಧ್ವನಿ ಮುದ್ರಣ ಭಾಷಣಗಳ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಡಾ. ಎಂ.ಎಂ. ಕಲಬುರ್ಗಿಯವರ ಕುರಿತಾಗಿ ಬಂದ ಅಭಿನಂದನಾ ಗ್ರಂಥ, ಜೀವನ ಚರಿತ್ರೆ, "ಸಮಗ್ರ ಸಂಶೋಧಕ" "ಕಲಬುರ್ಗಿ ನೆನಪು" ಗ್ರಂಥಗಳ ಅಧ್ಯಯನದ ಸಂಗತಿಗಳನ್ನು ದಾಖಲಿಸುವುದು.

## ಅಧ್ಯಯನದ ವ್ಯಾಪ್ತಿ

ಡಾ. ಎಂ.ಎಂ. ಕಲಬುರ್ಗಿಯವವರ ವಚನ ಸಂಪಾದನೆ ಸಂಪ್ರಬಂಧದಲ್ಲಿ ಕಲಬುರ್ಗಿಯವರ ಬದುಕಿನ ಪರಿಚಯ ಹಾಗೂ ಅವರ ವೃತ್ತಿ ಜೀವನದ ಅಧ್ಯಯನ ಕ್ಷೇತ್ರಗಳನ್ನು ಪರಿಚಯಿಸುವುದರೊಂದಿಗೆ ವಚನ ಸಾಹಿತ್ಯ ಪ್ರಕಟನೆಯ ಇತಿಹಾಸದಲ್ಲಿ ಕಲಬುರ್ಗಿಯವರ ಸ್ಥಾನವನ್ನು ನಿರ್ಧರಿಸುವ ಪ್ರಮುಖ ಅಂಶದೊಂದಿಗೆ ಅವರ ವಚನ ಸಂಪಾದನೆಯ ವಿವಿಧ ಹಂತಗಳನ್ನು ಆರು ಅಧ್ಯಾಯಗಳಲ್ಲಿ ನಿರೂಪಿಸಲಾಗಿದೆ.

## ಅಧ್ಯಯನದ ಸ್ವರೂಪ

ಕನ್ನಡ ಸಂಶೋಧನಾ ಲೋಕದಲ್ಲಿ ಅದ್ವಿತೀಯ ಸಾಧನೆಗೈದ ಡಾ ಎಂ.ಎಂ. ಕಲಬುರ್ಗಿಯವರು ಶಾಸನ, ಶಾಸ್ತ್ರ, ಛಂದಸ್ಸು, ಹಸ್ತಪ್ರತಿ ಶಾಸ್ತ್ರ, ವಚನ ಸಂಪಾದನೆ, ನಾಮವಿಜ್ಞಾನ, ಸಂಶೋಧನಾ ಕ್ಷೇತ್ರಗಳಲ್ಲಿ ತಮ್ಮದೇ ಆದ ಮೌಲಿಕ ಕೃತಿಗಳನ್ನು ನೀಡಿದ್ದಾರೆ. ಇದರೊಂದಿಗೆ ಡಾ. ಎಂ.ಎಂ. ಕಲಬುರ್ಗಿಯವರು

ಕನ್ನಡದ ವಿಶಿಷ್ಟ ಸಾಹಿತ್ಯ ಪ್ರಕಾರವಾದ ವಚನ ಸಾಹಿತ್ಯದ ಬಗ್ಗೆ ಅಪಾರವಾದ ಸಂಗ್ರಹಣೆ ಸಂಸ್ಕರಣೆ ಸಂಪಾದನೆ ಹಂತಗಳನ್ನು ದಾಟಿ ವಚನ ಸಂಪಾದನೆಗೆ ವಿಶೇಷವಾದ ಕೊಡುಗೆಯನ್ನು ನೀಡಿದ್ದಾರೆ. ಪ್ರಸ್ತುತ ಸಂಪ್ರಬಂಧದಲ್ಲಿ ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆ ಎಂಬ ವಿಷಯವನ್ನು ಕುರಿತು ಆರು ಅಧ್ಯಾಯಗಳಲ್ಲಿ ವಿಷಯಗಳ ವಿವರಣೆಯನ್ನು ವಸ್ತುನಿಷ್ಠವಾಗಿ ಹಂತಹಂತವಾಗಿ ನಿರೂಪಿಸಲಾಗಿದೆ

**ಅಧ್ಯಯನದ ಫಲಿತಗಳು :**

* ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆಯ ಅಧ್ಯಯನದಿಂದ ಗ್ರಂಥ ಸಂಪಾದನೆಗೆ ಸಂಬಂಧಿಸಿದಂತೆ ವಚನ ಸಂಪಾದನೆಯ ವಿಶೇಷ ಸ್ವರೂಪವೆಂದು ಗುರುತಿಸುವುದು.
* ವಚನಗಳ ಪಾಠ ನಿರ್ಣಯಗಳಲ್ಲಿ ಉಂಟಾಗುವ ತೊಡಕುಗಳನ್ನು ಅರ್ಥ ವ್ಯತ್ಯಾಸಗಳನ್ನು ಭಾಷಾ (ಬೇಧಗಳನ್ನು) ಅವಸ್ಥಾ ಬೇಧಗಳನ್ನು ಕಂಡುಕೊಳ್ಳುವುದು.
* ಪ್ರತಿಯೊಬ್ಬ ವಚನಕಾರರ ಕಾಯಕ ಸಂಬಂಧಿ ಪದಗಳನ್ನು ವಿಂಗಡಿಸುವುದು.
* ವಚನ ಸಾಹಿತ್ಯದ ಪಾರಿಭಾಷಿಕ ಪದಗಳ ಅರ್ಥವಿಶ್ಲೇಷಣೆಯನ್ನು ವಿವರಿಸುವುದು.
* ವಚನಕಾರರ ವೃತ್ತಿಪರ ಶಬ್ದಗಳ ಅರ್ಥವಿನ್ಯಾಸಗಳನ್ನು ವಿಶ್ಲೇಷಿಸುವುದು.
* ವಚನ ಸಾಹಿತ್ಯ ಸಂಪಾದನೆಯ ಬೆಳವಣಿಗೆಯು ಬೆಳೆದು ಬಂದ ಬಗೆಯನ್ನು ಅರಿತುಕೊಳ್ಳುವುದು.

**ಅಧ್ಯಾಯ : ಎರಡು**

**ಡಾ ಎಂ.ಎಂ. ಕಲಬುರ್ಗಿ0ುವರ ಜೀವನ ಮತ್ತು ಸಾಧನೆ**

ಕನ್ನಡ ಸಾಂಸ್ಕೃತಿಕ ಚರಿತ್ರೆಯ ಅಧ್ಯಯನದಲ್ಲಿ ಡಾ. ಎಂ.ಎಂ. ಕಲಬುರ್ಗಿಯವರು ಸತ್ಯ ನಿಷ್ಠುರ ಸಂಶೋಧಕರಾಗಿ, ಅಪಾರ ವಿದ್ಯಾರ್ಥಿಗಳ ಶಿಷ್ಯವತ್ಸಲರಾಗಿ ಪ್ರಾಧ್ಯಾಪಕರಾಗಿ, ಪ್ರಖರ ವಿಚಾರವಾದಿಯಾಗಿ, ಅಧ್ಯಯನ ನಿಷ್ಠ ಸಾಹಿತ್ಯ ಸಂಪಾದಕರಾಗಿ, ವಿವಿಧ ಸಾಂಸ್ಥಿಕ ಸಂಸ್ಥೆಗಳ ಸಮರ್ಥ ಆಡಳಿತಗಾರರಾಗಿ, ಕನ್ನಡ ಸಾಹಿತ್ಯ ಚಳುವಳಿಗಳ ಹಿಂದಿನ ಪ್ರಬಲ ಪ್ರೇರಣಾ ಸಂಘಟಕರಾಗಿ, ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿ, ನಾಡಿನ ಸಾಂಸ್ಕೃತಿಕ ರಾಯಭಾರಿಯಾಗಿ ಎಪ್ಪತ್ತೇಳು ವರ್ಷಗಳ ತುಂಬು ಜೀವನವನ್ನು ಸಾರ್ಥಕಗೊಳಿಸಿದ ಡಾ. ಎಂ.ಎಂ. ಕಲಬುರ್ಗಿಯವರು ಮಹಾನ್ ಸಾಧಕರು.

(ಡಾ. ಎಂ.ಎಂ. ಕಲಬುರ್ಗಿಯವರ ಜೀವನ, ವಿದ್ಯಾಭ್ಯಾಸ, ಪ್ರಾಧ್ಯಾಪಕ ವೃತ್ತಿ ಹಾಗೂ ಸಂಶೋಧನಾ ಕ್ಷೇತ್ರಕ್ಕೆ ಪ್ರವೇಶಿಸುವ ಪ್ರಾರಂಭಿಕ ಘಟ್ಟದ ವಿವಿಧ ಹಂತಗಳನ್ನು, ಕೌಟುಂಬಿಕ ಹಿನ್ನಲೆಯೊಂದಿಗೆ

ಈ ಅಧ್ಯಯನದಲ್ಲಿ ವಿವರಿಸಲಾಗಿದೆ. ಪ್ರಾಥಮಿಕ ಶಿಕ್ಷಣ, ಮಾಧ್ಯಮಿಕ ಶಿಕ್ಷಣ, ಕಲಬುರ್ಗಿಯವರ ಕೌಟುಂಬಿಕ ಹಿನ್ನಲೆ ಅವರ ಪ್ರಾಧ್ಯಾಪಕ ವೃತ್ತಿ ಸಂಶೋಧನಾ ಕಾರ್ಯ ಯೋಜನೆಗಳನ್ನು ದಾಖಲಿಸುವ ಪ್ರಯತ್ನವನ್ನು ಡಾ. ಎಂ.ಎಂ. ಕಲಬುರ್ಗಿಯವರ ಬದುಕು-ಬರಹದ ಅಡಿಯಲ್ಲಿ ವಿವರಿಸಲಾಗಿದೆ.

**ಅಧ್ಯಾಯ : ಮೂರು**

**ವಚನ ಸಾಹಿತ್ಯ ಪ್ರಕಟಣೆ0ಯು ಇತಿಹಾಸ**

ಸಾವಿರ ವರ್ಷಗಳಗಿಂತಲೂ ಅಧಿಕ ಇತಿಹಾಸ ಹೊಂದಿರುವ ಕನ್ನಡ ಭಾಷೆಯ ಹಲವಾರು ಸಾಹಿತ್ಯ ರೂಪಗಳನ್ನು ಪಡೆದುಕೊಂಡು ಬಂದಿದೆ. ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ವಚನ ಸಾಹಿತ್ಯಕ್ಕೆ ವಿಶೇಷವಾದ ಸ್ಥಾನವಿದೆ. ವಿಶ್ವಮಾನ್ಯ ಸಾಹಿತ್ಯ ಪ್ರಕಾರಗಳಲ್ಲಿ ವಚನಸಾಹಿತ್ಯವು ಒಂದು. ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶರಣರಿಂದ ಪ್ರಾರಂಭಗೊಂಡ ವಚನ ಸಾಹಿತ್ಯವು ಅನೇಕ ಕಾಯಕ ಜೀವಿಗಳ ಜೀವನಾನುಭವದ ಹಾಗೂ ಅನುಭಾವದ ಅಭಿವ್ಯಕ್ತಿಯಾಗಿ ಗೊಂಡು ವಚನಗಳ ರೂಪದಲ್ಲಿ ಬೆಳೆದು ಬಂದವು. 'ವಚನ ಚಳುವಳಿ' ಎಂಬ ವಿಶೇಷತೆಯೊಂದಿಗೆ ಸಾಹಿತ್ಯ ಚರಿತ್ರೆಯಲ್ಲಿ ದಾಖಲೆಯಾಗಿರುವ ವಚನ ಸಾಹಿತ್ಯವು ಕಲ್ಯಾಣ ಕ್ರಾಂತಿಯ ನಂತರ ನಾಡಿನ ಬೇರೆ ಬೇರೆ ದಿಕ್ಕುಗಳಿಗೆ ಶರಣರು ಹಂಚಿ ಹರಿದುಹೋದುದರಿಂದ ಶರಣರು ತಮ್ಮ ಆಸ್ತಿಯಂತೆ ಇರುವ ವಚನಗಳ ಕಟ್ಟುಗಳನ್ನು ತಮ್ಮೊಂದಿಗೆ ಕೊಂಡು ಕೊಂಡು ಹೋದ ಪರಿಣಾಮವಾಗಿ ಬೇರೆ ಬೇರೆ ಭಾಗಗಳಲ್ಲಿ ಮಠಮಾನ್ಯಗಳಲ್ಲಿ, ಮನೆಗಳಲ್ಲಿ ಸಂರಕ್ಷಣೆಯಾಗುವ ಉದ್ದೇಶದ ಅಲ್ಲಲ್ಲಿ ಉಳಿದುಕೊಂಡವು. ಕಾಲಾಂತರ ಮುಂದೆ ಹದಿನೈದನೆಯ ಶತಮಾನದಲ್ಲಿ ಹಂಪೆಯ ವಿಜಯನಗರ ಅರಸರ ಕಾಲದಲ್ಲಿ ನೂರೊಂದು ವಿರಕ್ತರು ಹನ್ನೆರಡನೆಯ ಶತಮಾನದ ವಚನಕಾರರು ವಚನಗಳನ್ನು ಶೋಧಿಸಿ , ಸಂಗ್ರಹಿಸಿ ಸ್ಥಲಕಟ್ಟಿನ ರೂಪದಲ್ಲಿ ವಚನ ಸಂಕಲನ ಕಾರ್ಯವನ್ನು ಕೈಗೆತ್ತಿಕೊಂಡರು ಇದರ ಪರಿಣಾಮವಾಗಿ ವಚನ ಸಂಪಾದನೆಯು ಮುಂದುವರಿದುಕೊಂಡು ಬಂದಿತು. ಇಪ್ಪತ್ತನೆಯ ಶತಮಾನದಲ್ಲಿ ವಚನ ಸಂಪಾದನೆಯನ್ನು ಪ್ರಾರಂಭಗೊಳಿಸಿದ ಶ್ರೇಯಸ್ಸು ಡಾ. ಫ.ಗು ಹಳಕಟ್ಟಿ , ಡಾ. ಶಿ.ಶಿ. ಬಸವನಾಳ , ಡಾ. ಆರ್.ಸಿ. ಹಿರೇಮಠ ಅವರಿಗೆ ಸಲ್ಲುತ್ತದೆ. ಡಾ. ಆರ್.ಸಿ. ಹಿರೇಮಠ ಅವರ ಮಾರ್ಗದರ್ಶನದಲ್ಲಿಯೇ ವಚನ ಸಂಪಾದನೆಯ ಕಾರ್ಯದಲ್ಲಿ ಅನುಭವವನ್ನು ಪಡೆದ ಡಾ. ಎಂ.ಎಂ. ಕಲಬುರ್ಗಿಯವರು ಗದುಗಿನ ತೋಂಟದಾರ್ಯಮಠ ದ "ಲಿಂಗಾಯತ ಅಧ್ಯಯನ ಸಂಸ್ಥೆ"ಯ ಮೂಲಕ ವಚನ ಸಾಹಿತ್ಯ ಪ್ರಕಟಣೆಯ ಯೋಜನೆಯನ್ನು ರೂಪಿಸಿದರು. 1999 ರ ಜುಲೈ 29 ಕ್ಕೆ ತೋಂಟದಾರ್ಯಮಠದ ಪೀಠಾಧಿಕಾರಿಗಳಾಗಿ ಡಾ. ತೋಂಟದ ಸಿದ್ದಲಿಂಗ ಮಹಾಸ್ವಾಮಿಗಳಿಗೆ ಇಪ್ಪತ್ತೈದು ವರ್ಷಗಳು ತುಂಬುತ್ತಿರುವ ಸಂದರ್ಭದಲ್ಲಿ "ವಚನ ಸಾಹಿತ್ಯ ಪ್ರಕಟಿಸಲು ಯೋಜನೆಯನ್ನು ರೂಪಿಸಲಾಯಿತು. ಈ ಹಿನ್ನಲೆಯಲ್ಲಿ ವಚನ ಸಾಹಿತ್ಯ ಪ್ರಕಟಣೆಯ ಇತಿಹಾಸವನ್ನು ವಸ್ತು-ನಿಷ್ಠವಾಗಿ ವಿವರಣಾತ್ಮಕವಾಗಿ ಈ ಅಧ್ಯಯದಲ್ಲಿ ವಿವರಿಸಲಾಗಿದೆ.

## ಅಧ್ಯಾಯ : ನಾಲ್ಕು

## ಡಾ. ಎಂ.ಎಂ. ಕಲಬುರ್ಗಿಯವವರ ವಚನ ಸಂಪಾದನೆ

ಕರ್ನಾಟಕದಲ್ಲಿ ವಚನ ಸಾಹಿತ್ಯ ಸಂಪಾದನೆಯ ನಾಲ್ಕನೆಯ ಘಟ್ಟದ ಕೆಲಸ ಗದುಗಿನ ವೀರಶೈವ ಅಧ್ಯಯನ ಸಂಸ್ಥೆಯದಾಗಿದೆ ಇದುವರೆಗಿನ ಅಪ್ರಕಟವಾಗಿ ಉಳಿದಿದ್ದ ವಚನಗಳನ್ನು ಪ್ರಕಟಿಸುವ ಗುರಿಯನ್ನು ಇರಿಸಿಕೊಂಡು ಕಾರ್ಯಪ್ರವೃತ್ತರಾದ ಡಾ.ಎಂ.ಎಂ. ಕಲಬುರ್ಗಿಯವರು ತಮ್ಮನ್ನು ಒಳಗೊಂಡ ಸಂಪಾದಕ ಮಂಡಳಿಯನ್ನು ರಚಿಸಿದರು. ವಚನ ಸಾಹಿತ್ಯದಲ್ಲಿ ವಿಶೇಷ ಅಧ್ಯಯನಗೈದ ವಿದ್ವಾಂಸರನ್ನು ಸಾಹಿತ್ಯ ಸಂಪಾದನೆಯಲ್ಲಿ ಅನುಭವವುಳ್ಳ ಹಿರಿಯ ವಿದ್ವಾಂಸರಾದ ಡಾ. ಎಸ್. ಶಿವಣ್ಣ, ಡಾ. ವೀರಣ್ಣ ರಾಜೂರ, ಡಾ. ಎಸ್. ವಿದ್ಯಾಶಂಕರ, ಡಾ. ಬಿ. ಆರ್. ಹಿರೇಮಠ, ಡಾ.ಬಿ.ವ್ಹಿ. ಶಿರೂರ , ಜಿ.ಎ. ಶಿವಲಿಂಗಯ್ಯ , ಎಸ್. ಉಮಾಪತಿ, ವೈ.ಸಿ. ಭಾನುಮತಿ, ಉಮಾದೇವಿ, ಬಿ.ಆರ್. ಹೂಗಾರ, ಮೊದಲಾದವರು ಪ್ರಾಚೀನ ವಚನ ಸಂಕಲನಗಳನ್ನು ಸಂಪಾದಿಸಿದರು. ಇವುಗಳನ್ನು ಮೈಸೂರು , ಬೆಂಗಳೂರು, ಧಾರವಾಡ ವಿಶ್ವವಿದ್ಯಾಲಯಗಳಲ್ಲಿ ಮತ್ತು ಬೇರೆ ಬೇರೆ ಸ್ಥಳಗಳಲ್ಲಿ ಸಿಗುವ ಹಸ್ತಪ್ರತಿಗಳ ಮೂಲಕ ಪರಿಷ್ಕರಿಸಿದರು. ಇದರ ಫಲವಾಗಿ ಲಿಂಗಾಯತ ಅಧ್ಯಯನ ಸಂಸ್ಥೆಗೆ ಪ್ರಾಚೀನ ವಚನ ಸಂಪುಟಗಳನ್ನು ಪ್ರಕಟಿಸಲು ಸಾಧ್ಯವಾಯಿತು. ಡಾ. ಆರ್.ಸಿ. ಹಿರೇಮಠ ವಚನ ಸಂಪಾದನೆಯ ನಂತರದ ಡಾ. ಎಂ.ಎಂ. ಕಲಬುರ್ಗಿಯವರ ಮಾರ್ಗದರ್ಶನದಲ್ಲಿ ಪ್ರಧಾನ ಸಂಪಾದಕತ್ವದಲ್ಲಿ ವಚನ ಸಂಪಾದನೆಯ ಕಾರ್ಯವು ಮುಂದುವರೆಯಿತು. ಈ ಸಂದರ್ಭದಲ್ಲಿ "ಚನ್ನಬಸವಣ್ಣನವರ ಷಟಸ್ಥಲ ವಚನ ಮಹಾಸಂಪುಟ" ಇವುಗಳ ಮಹತ್ವದ ವಚನ ಸಂಪಾದನೆಯಾಗಿದ್ದು ಇದರ ಸಂಪಾದಕರು ಡಾ. ಎಂ.ಎಂ. ಕಲಬುರ್ಗಿಯವರು.

ಡಾ. ಎಂ.ಎಂ. ಕಲಬುರ್ಗಿಯವರ ಪ್ರಧಾನ ಸಂಪಾದಕತ್ವದಲ್ಲಿ ರೂಪಗೊಂಡ ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಪ್ರಕಟಿಸಿದ ಸಮಗ್ರ ವಚನ ಸಂಪುಟಗಳನ್ನು ಆಕರವಾಗಿಟ್ಟುಕೊಂಡು 15 ವಚನ ಸಂಗ್ರಹ ಸಂಪುಟಗಳನ್ನು ಪ್ರಕಟಿಸಲಾಯಿತು. ವಚನ ಸಾಹಿತ್ಯ ಪ್ರಕಟನೆಯ ಇತಿಹಾಸದಲ್ಲಿ ಗದುಗಿನ ತೋಂಟದಾರ್ಯಮಠದ ಕೊಡುಗೆಯನ್ನು ಇಲ್ಲಿ ದಾಖಲಿಸುವ ಕಾರ್ಯವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

## ಅಧ್ಯಾಯ : ಐದು

## ವಚನ ಸಾಹಿತ್ಯ ಸಂಪಾದನೆಗೆ ಡಾ. ಎಂ.ಎಂ. ಕಲಬುರ್ಗಿಯವರ ಕೊಡುಗೆ

ಡಾ. ಎಂ.ಎಂ. ಕಲಬುರ್ಗಿಯವರ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ಸೇವೆಗೆ ಸೇರಿಕೊಂಡ ನಂತರ ಡಾ. ಆರ್.ಸಿ. ಹಿರೇಮಠ ರವರ ಪ್ರಧಾನ ಸಂಪಾದಕತ್ವದಲ್ಲಿ ವಚನ ವಾಙ್ಮಯ ಸಂಪಾದನೆಯ ಯೋಜನೆಯಲ್ಲಿ ಸಹಾಯಕ ಸಂಶೋಧಕರಾಗಿ ಅನುಭವಗಳನ್ನು ಪಡೆದು ವಚನ ಸಾಹಿತ್ಯದ ಸಂಪಾದನೆಗೆ ತಮ್ಮದೇ ಆದ ವಿಶಿಷ್ಟ ಪ್ರಯೋಗಗಳನ್ನು

ಸಂಪಾದನಾ ಕ್ರಮಗಳನ್ನು ವಚನ ಸಾಹಿತ್ಯಕ್ಕೆ ಬಳಸಿಕೊಂಡ ಪರಿಣಾಮವಾಗಿ ಮುಂದೆ ಬಂದ ಹೊಸ ಜನಾಂಗದ ಯುವ ಬರಹಗಾರರಿಗೆ ವಚನ ಸಂಪಾದನೆಯ ರೂಪರೇಷೆಗಳನ್ನು ನೀಡುವುದರೊಂದಿಗೆ ತಾವೇ ಅನೇಕ ವಚನ ಸಂಪಾದನಾ ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸುವ ಮೂಲಕ ವಚನ ಸಂಪಾದನೆಯ ಪ್ರಕಟನೆಯ ಇತಿಹಾಸದಲ್ಲಿ ಹೊಸ ಮಾರ್ಗವನ್ನು ರೂಪಿಸುದುದು ಅವರು ವಚನ ಸಾಹಿತ್ಯಕ್ಕೆ ನೀಡಿದ ವಿಶೇಷ ಕೊಡುಗೆಯಾಗಿದೆ. ಈ ವಿಷಯವನ್ನು ಕುರಿತು ಈ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

ಅಧ್ಯಾಯ : ಆರು

ಸಮಾರೋಪ

ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆಯ ವಿವಿಧ ಹಂತಗಳನ್ನು ಪರಿಚಯಿಸಿದ ಅವಲೋಕನದ ಅವಲೋಕನವನ್ನು ಫಲಿತಗಳ ಅಧ್ಯಯನಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಅನುಬಂಧ –1

ಡಾ. ಎಂ.ಎಂ. ಕಲಬುರ್ಗಿಯವರ ಜೀವನ ಘಟ್ಟಗಳು

ಅನುಬಂಧ –2

ಆಕರ ಗ್ರಂಥಗಳು

# ಅಧ್ಯಾಯ : ಎರಡು

## ಡಾ. ಎಂ.ಎಂ. ಕಲಬುರ್ಗಿಯವರ ಜೀವನ ಮತ್ತು ಸಾಧನೆ

* ಪೀಠಿಕೆ
* ಕೌಟುಂಬಿಕ ಹಿನ್ನಲೆ
* ಡಾ. ಎಂ.ಎಂ. ಕಲಬುರ್ಗಿಯವರ ಬಾಲ್ಯ –ಶಿಕ್ಷಣ
* ಡಾ. ಎಂ.ಎಂ. ಕಲಬುರ್ಗಿಯವರ ಉನ್ನತ ಶಿಕ್ಷಣ
* ಅಧ್ಯಾಪಕ ವೃತ್ತಿ ಜೀವನ
* ಕುಟುಂಬ ವತ್ಸಲರು
* ಸಾಹಿತ್ಯ ಸಂಪಾದನೆ –ಸಾಧನೆ
* ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿ
* ಯೋಜನೆಗಳ ರುವಾರಿ

## ಅಧ್ಯಾಯ : ಎರಡು

# ಡಾ. ಎಂ.ಎಂ. ಕಲಬುರ್ಗಿಯವರ ಜೀವನ ಮತ್ತು ಸಾಧನೆ

### ಪೀಠಿಕೆ :

ಕರ್ನಾಟಕದ ಸಾಂಸ್ಕೃತಿಕ ಪರಂಪರೆಯಲ್ಲಿ ಕನ್ನಡದ ಶ್ರೇಷ್ಠ ಸಾಹಿತಿಗಳಾಗಿ, ನಿರ್ಭೀತ ವಿಚಾರವಾದಿಯಾಗಿ, "ಸಂಶೋಧನೆ ಎನ್ನುವುದು ಸತ್ಯವನ್ನು ಶೋಧಿಸಲು ಮಾಡಿಕೊಂಡ ಪ್ರತಿಜ್ಞೆ" ಎಂದು ನಂಬಿ ದಿಟದ ದಾರಿಯಲ್ಲಿ ಸಾಗಿ ಬಂದ ಡಾ. ಎಂ.ಎಂ. ಕಲಬುರ್ಗಿಯವರು ಕನ್ನಡ ನಾಡು-ನುಡಿಯನ್ನು ಬೆಳೆಸಿದ ಮಹಾನ್ ಪುಣ್ಯ ಪುರುಷರಲ್ಲಿ ಅಗ್ರಮಾನ್ಯರು, ಕನ್ನಡ ಸಂಸ್ಕೃತಿಯ ವಿವಿಧ ಕ್ಷೇತ್ರಗಳಲ್ಲಿ ತಮ್ಮ ಆಧ್ಯಯನ, ಅಧ್ಯಾಪನ, ಸಂಶೋಧನೆಯ ಕ್ಷೇತ್ರ ಕಾರ್ಯಗಳಮೂಲಕ ಕನ್ನಡ ಸಾಹಿತ್ಯದ ಮೂಲ ಚೂಲಗಳನ್ನು ಅನ್ವೇಷಿಸಿಸಿ ಅನೇಕ ಹೊಸ ಶೋಧಗಳಿಗೆ ದಾರಿ ಮಾಡಿಕೊಟ್ಟವರು ಡಾ. ಎಂ.ಎಂ. ಕಲಬುರ್ಗಿಯವರು . ೨೮-೧೧-೧೯೩೮ ರಿಂದ ३೦-೮-೨೦೧೫ ರ ಅವಧಿಯ ಎಪ್ಪತ್ತೇಳು ವರ್ಷಗಳ ಕಾಲ ಜೀವಿಸಿದ ಡಾ. ಎಂ.ಎಂ. ಕಲಬುರ್ಗಿಯವರು ಪ್ರತಿಭಾವಂತ ವಿದ್ಯಾರ್ಥಿಯಾಗಿ, ಅಧ್ಯಯನ ಶೀಲ ಪ್ರಾಧ್ಯಾಪಕರಾಗಿ ಹೊಸ ಹೊಸ ಸಂಶೋಧನೆಗಳ ಸಮಗ್ರ ಸಂಶೋಧಕರಾಗಿ, ನೂರಾರು ಪುಸ್ತಕಗಳ ಪ್ರಕಟಣೆಗಳಿಗೆ ಪ್ರೇರಣಾ ಶಕ್ತಿಯಾಗಿ ನಾಡು ನುಡಿಯನ್ನು ಕಟ್ಟುವಲ್ಲಿ ಅನೇಕ ಮಠ ಮಾನ್ಯಗಳಿಗೆ ಸಂಘ ಸಂಸ್ಥೆಗಳಿಗೆ ಮಾರ್ಗದರ್ಶಕರಾಗಿ, ನಿರ್ದೇಶಕರಾಗಿ, ಸಲಹೆಗಾರರಾಗಿ ಸಮರ್ಥ ಆಡಳಿತಗಾರರಾಗಿ, ಸಂಶೋಧನೆಯನ್ನೇ ಉಸಿರಾಗಿರಿಸಿಕೊಟ್ಟ ಕೊಂಡ ಕನ್ನಡ ನಾಡು ಕಂಡ ಅಪರೂಪದ ಮಹಾನ್ ಶಕ್ತಿ ಡಾ. ಎಂ.ಎಂ. ಕಲಬುರ್ಗಿಯವರು. ಅವರೊಬ್ಬ ಶ್ರೇಷ್ಠ ವಿದ್ವಾಂಸರಾಗಿದ್ದರು. ವೈಚಾರಿಕ ನಿಲುವುಗಳಿಗೆ ಯಾವಾಗಲೂ ಬದ್ಧರಾಗಿದ್ದ ನೈತಿಕ ಸ್ಥೈರ್ಯ ಕಲಬುರ್ಗಿಯವರದು. ಯಾವ ವಿರೋಧವನ್ನು ಲೆಕ್ಕಿಸದೆ ತಮಗೆ ಸತ್ಯವೆಂದು ಕಂಡದ್ದನ್ನು ಹೇಳುವ ನೈತಿಕ ಸಾಮರ್ಥ್ಯ ಅವರದಾಗಿತ್ತು. ಕನ್ನಡದ ಅಮೂಲ್ಯ ಸಾಹಿತ್ಯ ನಿಧಿಯೆನಿಸಿದ ಶರಣರ ವಚನ

ಸಾಹಿತ್ಯದ ಮೇಲೆ ಅವರಿಗೆ ಅಪಾರವಾದ ಗೌರವ, ಅಭಿಮಾನ, ಹೆಮ್ಮೆಯನ್ನಿರಿಸಿಕೊಂಡ ಡಾ. ಎಂ.ಎಂ. ಕಲಬುರ್ಗಿಯವರು ಭಾರತ ದೇಶದ ೨೮ ಭಾಷೆಗಳಲ್ಲಿ ವಚನಕಾರರ ಸಂದೇಶಗಳನ್ನು ಅನುವಾದಿಸುವ ಬೃಹತ್ ಯೋಜನೆಯನ್ನು ತಮ್ಮ ಜೀವಮಾನದ ಮಹಾನ್‌ಸಾಧನೆಯನ್ನಾಗಿ ಸ್ವೀಕರಿಸಿ ಅದನ್ನು ಅತ್ಯಂತ ಸಮರ್ಥರೀತಿಯಲ್ಲಿ ಸುವ್ಯವಸ್ಥಿತವಾಗಿ ಪೂರ್ಣಗೊಳಿಸಿ ಮಾನವ ಜನ್ಮದ ಬದುಕಿಗೆ ಬೆಲೆಯನ್ನು ತಂದು ಕೊಟ್ಟ ಮಹಾನ್ ಕಾಯಕ ಜೀವಿಗಳು ಡಾ. ಎಂ.ಎಂ. ಕಲಬುರ್ಗಿಯವರು ಕರ್ನಾಟಕದ ಬಹು ಪ್ರಸಿದ್ದ ವಿದ್ವಾಂಸರಲ್ಲಿ ಒಬ್ಬರು, ಅವರ ಅಧ್ಯಯನ ಮತ್ತು ಕೊಡುಗೆಗಳು ಶಾಸನಶಾಸ್ತ್ರ, ಸಾಹಿತ್ಯ ಚರಿತ್ರೆ, ಛಂದಸ್ಸು, ಗ್ರಂಥ ಸಂಪಾದನೆ, ಸಾಹಿತ್ಯ, ನಿಘಂಟು, ಶಾಸನ, ಛಂದಸ್ಸು, ಜನಪದ, ಸಂಪಾದನೆ, ಇತಿಹಾಸ, ನಾಮ ವಿಜ್ಞಾನ, ಶಾಸ್ತ್ರ ಸಾಹಿತ್ಯ, ಇತಿಹಾಸ, ವಾಸ್ತುಶಿಲ್ಪ, ಹಸ್ತಪ್ರತಿಶಾಸ್ತ್ರ, ಜ್ಞಾನ ಸಂಪಾದನೆ, ಸ್ಥಳನಾಮಗಳ ಅಧ್ಯಯನ, ವಚನ ಸಂಪಾದನೆಗಳಂಥ ಅಲಕ್ಷಿತ ಕ್ಷೇತ್ರಗಳನ್ನು ಆಯ್ಕೆ ಮಾಡಿಕೊಂಡು ಅವುಗಳನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡುವುದು ಅವರ ವಿಶೇಷ ಆಸಕ್ತಿಯ ಕಾರ್ಯವಾಗಿತ್ತು. ಸಾಂಸ್ಕೃತಿಕ ಅಧ್ಯಯನದ ಮೂಲಕ ಹಲವಾರು ಸಂಶೋಧನೆಗಳನ್ನು ಕೈಕೊಂಡು ಅವುಗಳನ್ನು ಮಾರ್ಗ ಸಂಪುಟಗಳಲ್ಲಿ ಪ್ರಕಟಿಸುವ ಮೂಲಕ ಕನ್ನಡ ಸಂಶೋಧನಾ ಲೋಕದಲ್ಲಿ "ಮಹಾಮಾರ್ಗ"ದ ನಿರ್ಮಾಪಕರಾಗಿ ಡಾ. ಎಂ.ಎಂ. ಕಲಬುರ್ಗಿಯವರು ರೂಪುಗೊಂಡಿದ್ದು ಕನ್ನಡ ವಿದ್ವತ್ ಲೋಕದ ಮಹಾ ಸಾಧನೆಯಾಗಿದೆ. ಡಾ. ಎಂ.ಎಂ. ಕಲಬುರ್ಗಿಯವರ ಜೀವನ ಮತ್ತು ಸಾಹಿತ್ಯ ಸಂಶೋಧನೆಯ ಅಧ್ಯಯನವೆಂದರೆ ಕರ್ನಾಟಕ ಸಾಂಸ್ಕೃತಿಕ ಪರಂಪರೆಯ ಅಧ್ಯಯನವೇ ಆಗಿದೆ. ಡಾ. ಎಂ.ಎಂ. ಕಲಬುರ್ಗಿಯವರು ಕರ್ನಾಟಕದ ಬಹು ಪ್ರಸಿದ್ಧ ವಿದ್ವಾಂಸರಲ್ಲೊಬ್ಬರಾಗಿದ್ದ ನಿಷ್ಠುರವಾದಿಯಾಗಿದ್ದರು. ಡಾ. ಚಂದ್ರಶೇಖರ ಕಂಬಾರ ನಂತರ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಎಂ.ಎಂ. ಕಲಬುರ್ಗಿಯವರು ಕನ್ನಡ ಸಾರಸತ್ವ ಲೋಕದ ಅಕ್ಷರಜೀವಿಯಾಗಿದ್ದರು.

## ಡಾ. ಎಂ.ಎಂ.ಕಲಬುರ್ಗಿಯವರ ಜೀವನ :

ಡಾ. ಕಲಬುರ್ಗಿಯವರು ವಿಜಯಪುರ ಜಿಲ್ಲೆಯ ಸಿಂದಗಿ ತಾಲೂಕಿನ ಯರಗಲ್ಲ ಗ್ರಾಮದ ಮಡಿವಾಳಪ್ಪ ಮತ್ತು ಗುರಮ್ಮ ದಂಪತಿಗಳ ಮೂರನೆಯ ಮಗನಾಗಿ ಜನಿಸಿದರು. ತಾಯಿ ಗುರಮ್ಮನವರ ತವರೂರು ಗುಬ್ಬೆವಾಡ ಹೀಗಾಗಿ, ಡಾ. ಎಂ.ಎಂ. ಕಲಬುರ್ಗಿಯವರು ದಿನಾಂಕ ೨೮ ನವ್ಹಂಬರ ೧೯೩೮ ರಂದು ಗುಬ್ಬೇವಾಡದಲ್ಲಿ ಜನಿಸಿದರು . ಯರಗಲ್ಲ, ಸಿಂದಗಿಯಲ್ಲಿ ಪ್ರಾಥಮಿಕ ಮಾಧ್ಯಮಕ ಶಿಕ್ಷಣವನ್ನು ಪೂರೈಸಿದ ಕಲಬುರ್ಗಿಯವರು ಬಾಲ್ಯದಿಂದಲೂ ಶಿಕ್ಷಣದಲ್ಲಿ ಪ್ರಥಮ ಸ್ಥಾನವನ್ನು ಪಡೆಯುತ್ತಲೇ ಬಂದರು. ಮುಂದೆ ಬಿ.ಎಲ್.ಡಿ. ಸಂಸ್ಥೆಯ ವಿಜಯಪುರ ನಗರದ ಆಗಿನ ವಿಜಯ ಕಾಲೇಜಿನ ಈಗಿನ ಕೆ.ಸಿ.ಸಿ. ಸೈನ್ಸ ಮತ್ತು ಎಸ್.ಬಿ. ಆರ್ಟ್ಸ್ ಕಾಲೇಜಿನಲ್ಲಿ ಪದವಿ ವಿದ್ಯಾರ್ಥಿಯಾಗಿ ಬಿ.ಎ. (ಕನ್ನಡ) ಪದವಿಯನ್ನು ವಿಜಯಪುರದ ವಿಜಯ ಕಾಲೇಜಿನಿಂದ ಪಡೆದುಕೊಂಡರು. ಬಿ.ಎ. ಪದವಿಯಲ್ಲಿ ಕನ್ನಡ ಅಧ್ಯಯನ ಮಾಡುವ ಸಂದರ್ಭದಲ್ಲಿ ಹಿರಿಯ ಪ್ರಾಧ್ಯಾಪಕರಾದ ಪ್ರೊ.ಬಿ.ಟಿ.

ಸಾಸನೂರ ಅವರ ಪಾಠ ಪ್ರವಚನಗಳು ಅವರಿಗೆ ಅಧ್ಯಯನಶೀಲದ ಕ್ರಮ ಬದ್ಧತೆ, ಸಮಯ ಪರಿಪಾಲನೆ, ಶಿಸ್ತಿನ ಕ್ರಮಬದ್ಧತೆ ಕಲಬುರ್ಗಿಯವರ ಮೇಲೆ ಪ್ರಭಾವಬೀರಿದವು.

**ಡಾ. ಎಂ.ಎಂ. ಕಲಬುರ್ಗಿಯವರ ಕೌಟುಂಬಿಕ ಹಿನ್ನಲೆ :**

ಡಾ. ಎಂ.ಎಂ. ಕಲಬುರ್ಗಿ ಎಂಬ ಹೆಸರಿನಿಂದ ಕನ್ನಡ ಸಾರಸತ್ವ ಲೋಕದಲ್ಲಿ ಅದ್ವಿತೀಯವಾದ ಅನನ್ಯ ಸಾಧನೆಗೈದವರು ಡಾ. ಮಲ್ಲೇಶಪ್ಪ ತಂದೆ ಮಡಿವಾಳಪ್ಪ ಕಲಬುರ್ಗಿ . "ಕಲಬುರ್ಗಿ" ಹೆಸರಿನ ಮನೆತನದವರು ಕರ್ನಾಟಕದಲ್ಲಿ ಅನೇಕ ಜನ ಇದ್ದರೂ ಕನ್ನಡ ವಿದ್ವತ್ ಪರಂಪರೆಯಲ್ಲಿ ಮನೆ ಮಾತಾಗಿರುವವರೆಂದರೆ ಒಬ್ಬರೆ ಅವರು ಯಾರೆಂದರೆ ಕನ್ನಡದ ಶ್ರೇಷ್ಠ ಸಮಗ್ರ ಸಂಶೋಧಕರೆಂಬ ಪ್ರಖ್ಯಾತನಾಮ ಹೊಂದಿದ ಡಾ. ಎಂ.ಎಂ. ಕಲಬುರ್ಗಿಯವರು. ಗೆಳೆಯರು ಪ್ರೀತಿಯಿಂದ ಇವರನ್ನು 'ಮಲ್ಲಿನಾಥ', 'ಮಲ್ಲೇಶಪ್ಪ ', 'ಮಲ್ಲಣ್ಣ' ಎಂದು ಕರೆಯುತ್ತಿದ್ದರು.

"ಕಲಬುರ್ಗಿ" ಇದು ಒಂದು ಊರಿನ ಹೆಸರು ಹೌದು ಒಬ್ಬ ವ್ಯಕ್ತಿಯ ಮನೆತನದ ಹೆಸರು ಹೌದು ಡಾ. ಎಂ.ಎಂ. ಕಲಬುರ್ಗಿಯವರ ಮೂಲ ಊರು ಕಲಬುರ್ಗಿಯೇ ಆಗಿತ್ತು. ಹಿಂದೆ ಇವರ ಮನೆತನಕ್ಕೆ "ದೇಶಮುಖ" ವತನದಾರಿಕೆ ಇತ್ತು. ನಿಜಾಮನ ಆಡಳಿತದಲ್ಲಿ ಈ ವತನದಾರಿಕೆ ತಪ್ಪಿಹೋಗಿ, ಹಿರಿಯರು ಬದುಕಿಗಾಗಿ ಊರುಬಿಟ್ಟು ಬೇರೆ ಕಡೆಗೆ ಊರಿಂದ ಊರಿಗೆ ವಲಸೆ ಹೋಗುತ್ತಾರೆ. ವ್ಯಾಪಾರ ವೃತ್ತಿಯನ್ನು ಕೈಗೊಂಡು ಸಿಂದಗಿ ತಾಲೂಕಿನ ದೇವರನಾವದಗಿ ಗ್ರಾಮಕ್ಕೂ ಈಗಿನ ಯರಗಲ್ಲ ಗ್ರಾಮಕ್ಕೂ ಬಂದು ನೆಲೆ ನಿಲ್ಲುತ್ತಾರೆ. ಇವರ ಅಣ್ಣ ತಮ್ಮಂದಿರದ ಇನ್ನೊಂದು ಬಡ್ಡಿ (ವಂಶಸ್ಥರು) ಸುರಪುರ ತಾಲೂಕಿನ "ಕನ್ನಳ್ಳಿಗೆ" ಬಂದು ನೆಲೆಸುತ್ತಾರೆ. ಈ ಮನೆತನದವರಿಗೆ ಈ ಊರುಗಳಲ್ಲಿ "ಅಂಗಡಿ" ಅವರೆಂದೇ ರೂಢಿಯಿಂದ ಕರೆಯುತ್ತಾರೆ. ಆದರೆ ಮನೆನತದ ಖಾತೆ ಖಿರ್ದಿಗಳಲ್ಲಿ ಇವರ ಮನೆತನದ ಹೆಸರು "ಕಲಬುರ್ಗಿ ಎಂದೇ ದಾಖಲಾಗಿದೆ. ವತನದಾರರಾಗಿದ್ದ ಸಂದರ್ಭದ ಇವರ ಮನೆ ಇಂದಿಗೂ ಕಲಬುರ್ಗಿ ಬ್ರಹ್ಮಪುರದಲ್ಲಿದ್ದು ಈ ಮನೆತನದ ಹಕ್ಕುದಾರಿಕೆ ಶೀಲಪ್ಪ ಕುಲಕರ್ಣಿ ಅವರ ಕಬ್ಜಾದಲ್ಲಿದೆ ಎಂದು ಹೇಳಲಾಗುತ್ತಿದೆ. ಈ ಮನೆತನದ ಮೂಲ ಪುರುಷ ಸಿದ್ದಪ್ಪ ಯಜಮಾನನಾಗಿದ್ದು ಇವರಿಂದ ಕಲಬುರ್ಗಿಯವರ ವಂಶಾವಳಿ ಪ್ರಾರಂಭವಾಗುತ್ತದೆ.

ಡಾ. ಎಂ.ಎಂ. ಕಲಬುರ್ಗಿಯವರ ಅಜ್ಜನ ಹೆಸರು ಸಂಗಪ್ಪ ಯಜಮಾನ. ಈತನು ವ್ಯಾಪಾರವನ್ನು ಮಾಡುತ್ತ ಸಿಂದಗಿ ತಾಲೂಕಿನ ದೇವರನಾವದಗಿಯಲ್ಲಿ ನೆಲೆ ನಿಲ್ಲುತ್ತಾರೆ. ಈ ಸಂಗಪ್ಪಜ್ಜನಿಗೆ ಮಡಿವಾಳಪ್ಪ ಮತ್ತು ಮುರಗಪ್ಪರೆಂಬ ಹೆಸರಿನ ಇಬ್ಬರು ಗಂಡು ಮಕ್ಕಳು ಒಬ್ಬಳು ಹೆಣ್ಣು ಮಗಳು ಹೆಸರು ನೀಲಮ್ಮನೆಂಬುದಾಗಿರುತ್ತದೆ. ಇವಳು ಸಿಂದಗಿ ತಾಲೂಕಿನ 'ಅಸ್ಕಿ' ಗ್ರಾಮದ ಪಡಶೆಟ್ಟಿಯವರ ಸೊಸೆಯಾಗಿ ಮನೆಯನ್ನು ತುಂಬುತ್ತಾಳೆ. ಗಂಡು ಮಕ್ಕಳಿಬ್ಬರೂ ತಂದೆಯ ವ್ಯಾಪಾರವನ್ನು ನೋಡಿಕೊಳ್ಳುತ್ತಾ ತಮ್ಮ ಬದುಕನ್ನು ಸಾಗಿಸುತ್ತಾರೆ. ಮಡಿವಾಳಪ್ಪ ಶಿವಾನುಭವಿಯಾಗಿರುತ್ತಾನೆ. ತನ್ನಂಥ ನಾಲ್ಕಾರು

ಆಧ್ಯಾತ್ಮ ಜೀವಿಗಳನ್ನು ಕಟ್ಟಿಕೊಂಡು ದೇವರನಾವದಗಿಯಲ್ಲಿ ಮಠವೊಂದನ್ನು ಕಟ್ಟಿಸಿ ಅದರ ನಿರ್ವಹಣೆಗಾಗಿ ಅಲ್ಲಿ ೧೬ (ಹದಿನಾರು) ಎಕರೆ ಜಮೀನನ್ನು ಕೊಂಡು ಕೊಳ್ಳುತ್ತಾರೆ. ಸದರಿ ಜಮೀನಿನ ಉಸ್ತುವಾರಿಕೆ ಹಕ್ಕನ್ನು ಮಡಿವಾಳಪ್ಪನಿಗೆ ವಹಿಸಲಾಗುತ್ತದೆ. ಅಷ್ಟೊಂದು ನಂಬಿಗಸ್ಥ ಪ್ರಾಮಾಣಿಕನಾಗಿರುತ್ತಾನೆ.

ಕೆಲವು ದಿವಸ ಕಳೆಯುವುದರೊಳಗಾಗಿ ಮಾನ್ಸೂನ (ಮುಂಗಾರು) ಮಳೆಗಾಲ ಏರು ಪೇರಾಗಿ ಮಳೆಯ ಅಭಾವ ಉಂಟಾಗಿ ಬರಗಾಲದ ಮುನ್ಸೂಚನೆಯನ್ನು ಅರಿತ ಮಡಿವಾಳಪ್ಪನವರು "ಯರಗಲ್"ಗ್ರಾಮಕ್ಕೆ ಬರುತ್ತಾರೆ. ಈತನ ಸೋದರ ಮುರಿಗೆಪ್ಪನವರು ಸುರಪುರ ತಾಲೂಕಿನ "ಕನ್ನಳ್ಳಿ" ಗ್ರಾಮಕ್ಕೆ ಬಂದು ನೆಲೆನಿಲ್ಲುತ್ತಾರೆ. ಇಲ್ಲೆಲ್ಲಾ ಅವರ ವ್ಯಾಪಾರ ವಹಿವಾಟು ಚೆನ್ನಾಗಿ ನಡೆಯುತ್ತದೆ. ಮಡಿವಾಳಪ್ಪನವರು ಯರಗಲ್ಲು ಗ್ರಾಮದಲ್ಲಿ ಬಾಡಿಗೆ ಮನೆ ಮಾಡಿ ಸಂಸಾರ ಹುಡಬೇಕಾಗುತ್ತದೆ. ಸಿಂದಗಿ ಸ್ಥಿತಿವಂತ ಮನೆತನದ ಪವಾಡಶೆಟ್ಟರ ಮಗಳಾದ ನೀಲಮ್ಮ ಎಂಬವಳೊಂದಿಗೆ ಮಡಿವಾಳಪ್ಪನ ಮದುವೆಯಾಗುತ್ತದೆ. ಈತನಿಗೆ ತಮ್ಮ ಮನೆತನದ ಮೂಲ ಪುರುಷ "ಸಿದ್ದಪ್ಪ" ಎಂಬವನ ಹೆಸರನ್ನು ಇಡುತ್ತಾರೆ. ಆದರೆ ಇವರ ದಾಂಪತ್ಯದಲ್ಲಿ ವಿರಸ ಪ್ರಾರಂಭವಾಗುತ್ತದೆ. ಇದಕ್ಕೆ ಕಾರಣ ಇಲ್ಲದಿಲ್ಲ. ಸಿಂದಗಿ ಪವಾಡಶೆಟ್ಟರ ಮನೆಯ ಏಕಮಾತ್ರ ಪುತ್ರಿ ನೀಲಮ್ಮಳಾಗುತ್ತಾಳೆ. ತಂದೆ-ತಾಯಿ ಕಕ್ಕುಲಾತಿಯಲ್ಲಿ ಬೆಳೆದ ಮಗಳಾದ ಕಾರಣ ಸೌಲಭ್ಯದಿಂದ ವಂಚಿತವಾದ ಸಣ್ಣಹಳ್ಳಿ ಯರಗಲ್ಲಿನಲ್ಲಿದ್ದುಕೊಂಡು ಸಂಸಾರ ಮಾಡಲು ಮಡಿವಾಳಪ್ಪನವರಿಗೆ ಸ್ವಾಭಿಮಾನ ಕಾಡುತ್ತದೆ. ಪತಿಯು ಯರಗಲ್ಲದಲ್ಲಿ ವಾಸಿಸುವುದು ಸತಿಯು ಸಿಂದಗಿಯಲ್ಲಿ ಇರುವುದು ಹೀಗೆ ಕೆಲವು ದಿನಗಳು ಕಳೆದು ಹೋಗುತ್ತವೆ.

ಸಿಂದಗಿ ತಾಲೂಕಿನ ಗುಬ್ಬೇವಾಡ ಗ್ರಾಮವು ಮಡಿವಾಳಪ್ಪನವರ ತಾಯಿಯ ತವರೂರು ಅಲ್ಲಿಯವರ ನೆರವನ್ನು ಪಡೆದು ಮಡಿವಾಳಪ್ಪನವರು ಎರಡನೆಯ ಮದುವೆಯನ್ನು ಮಾಡಿಕೊಳ್ಳುತ್ತಾರೆ. ಹೆಸರು ಗುರಮ್ಮನವರು ಮಡಿವಾಳಪ್ಪ ಹಾಗೂ ಶ್ರೀಮತಿ ಗುರಮ್ಮ ದಂಪತಿಗಳ ಪುಣ್ಯ ಉದರದಲ್ಲಿ ಮಾರ್ಗಶಿರ ಮಾಸದ ಕ್ರಿಶ. ೧೯೩೮ ನವ್ಹಂಬರ ತಿಂಗಳ ೨೮ನೇ ತಾರೀಖಿನ ಸೋಮವಾರ ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ತಾಯಿಯ ತವರೂರಾದ "ಗುಬ್ಬೇವಾಡ'ದಲ್ಲಿ ಮಲ್ಲೇಶಪ್ಪ ಮಡಿವಾಳಪ್ಪ ಕಲಬುರ್ಗಿ" ಯವರ ಜನನವಾಯಿತು. ಮಡಿವಾಳಪ್ಪ ಗುರಮ್ಮ ದಂಪತಿಗಳಿಗೆ ಒಟ್ಟು ಆರು ಜನ ಮಕ್ಕಳು ಮೊದಲನೇಯವರು ಭೋಜಪ್ಪನವರು, ಇವರು ಮನೆತನದ ಮೇಲುಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದರು. ಎರಡನೆಯವರು ಶಾಂತಪ್ಪನವರು ಇವರು ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದರು. ಮೂರನೆಯವರು ಮುರುಗಪ್ಪನವರು ಇವರು ಇದ್ದ ಸ್ವಲ್ಪ ಜಮೀನನಿನ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದರು. ನಾಲ್ಕನೆಯವರೇ ಡಾ. ಎಂ.ಎಂ. ಕಲಬುರ್ಗಿಯವರು, ಐದನೆಯವರು ಒಬ್ಬ ಹೆಣ್ಣು ಮಗಳು ಹೆಸರು ಲಕ್ಷ್ಮೀಬಾಯಿ ಇವರನ್ನು ಇಂಡಿ ತಾಲೂಕಿನ ಹಿರೇಬೆವನೂರ ಗ್ರಾಮದ ಉಪ್ಪಿನ ಮನೆತನಕ್ಕೆ ಕೊಡುತ್ತಾರೆ. ಇವರೆಲ್ಲರೂ ಸಿಂದಗಿ ಪವಾಡಶೆಟ್ಟಿ

ದೊಡ್ಡಮ್ಮಳ ಮಗನಾದ ಸಿದ್ದಪ್ಪ ಯಜಮಾನನೊಂದಿಗೆ ಸೌಹಾರ್ದ ಸಂಬಂಧವನ್ನಿಟ್ಟುಕೊಂಡು ಅವಿಭಕ್ತ ಕುಟುಂಬದವರಾಗಿಯೇ ಜೀವನ ಸಾಗಿಸುತ್ತಿದ್ದರು.

ಡಾ. ಎಂ.ಎಂ. ಕಲಬುರ್ಗಿಯವರ ಬಾಲ್ಯ- ಶಿಕ್ಷಣ :

ಮಲ್ಲೇಶಪ್ಪ ಮಡಿವಾಳಪ್ಪ ಕಲಬುರ್ಗಿಯವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಸ್ವಗ್ರಾಮವಾದ ಯರಗಲ್ಲ ಗ್ರಾಮದಲ್ಲಿ ಒಂದನೆ ವರ್ಗದಿಂದ ನಾಲ್ಕ ವರ್ಗದವರಿಗೆ ಸಾಗಿತು ಅಲ್ಲಿ ಇದ್ದುದು ಕೇವಲ ಕಿರಿಯ ಪ್ರಾಥಮಿಕ ಶಾಲೆ ಮಾತ್ರ ಮುಂದೆ ಕಲಬುರ್ಗಿಯವರು ಕಿರಿಯ ಪ್ರಾಥಮಿಕ ಶಿಕ್ಷಣ ಪೂರೈಸುತ್ತಿದ್ದಂತೆ ಐದನೆಯ ತರಗತಿಯಿಂದ ಏಳನೆಯ ತರಗತಿಯವರೆಗೆ ಮುಂದುವರಿಸಿ ಹಿರಿಯ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿದರು ಪರಿಣಾಮವಾಗಿ ಕಲಬುರ್ಗಿಯವರು ಪ್ರಾಥಮಿಕ ಶಿಕ್ಷಣವು ಯರಗಲ್ಲದಲ್ಲಿಯೇ ಪೂರ್ಣಗೊಂಡಿತು. ಪ್ರಾರಂಭದಿಂದಲೂ ಪ್ರತಿಭಾವಂತನಾಗಿದ್ದ ಮಲ್ಲೇಶಪ್ಪನು ಸಮೀಪದ ತಾಲೂಕು ಸ್ಥಳವಾದ ಸಿಂದಗಿಯ ಶ್ರೀ ಸಿದ್ದೇಶ್ವರ ಹೈಸ್ಕೂಲಿನಲ್ಲಿ ಮಾಧ್ಯಮಿಕ ಶಿಕ್ಷಣಕ್ಕಾಗಿ ಸಿಂದಗಿ ತಾಲೂಕು ಕೇಂದ್ರ ಸ್ಥಳಕ್ಕೆ ಪ್ರವೇಶ ಮಾಡಿದರೂ ಸಿಂದಗಿಯಲ್ಲಿಯೇ ಹೈಸ್ಕೂಲ ಅಭ್ಯಾಸದ ಏರ್ಪಾಡಾಗುತ್ತದೆ. ಪವಾಡಶೆಟ್ಟರ ಮನೆಯಲ್ಲಿದ್ದು ತಮ್ಮ ವಿದ್ಯಾಭ್ಯಾಸ ಮುಂದುವರಿಸುತ್ತಾರೆ. ಆಗ ದುಡ್ಡಿನ ಚಲಾವಣೆ ಅಷ್ಟಾಗಿರಲಿಲ್ಲ ಮನೆಯಲ್ಲಿ ಕಾಳಿನ ಕಣಜವಿದ್ದರೂ ಹಣಕಾಸಿನ ತೊಂದರೆ ಇದ್ದೇ ಇರುತ್ತಿತ್ತು. ಆ ದಿನಗಳಲ್ಲಿ ತುಂಬಾ ಮಿತವ್ಯಯದಿಂದ ಜೀವನ ತಂದೆಯವರಂತೂ ತುಂಬಾ ಲೆಕ್ಕಾಚಾರದ ಮನುಷ್ಯ ಹೈಸ್ಕೂಲು ಎರಡು ವರ್ಷ ಮುಗಿಯುತ್ತಿದ್ದಂತೆ ಪವಾಡಶೆಟ್ಟರ ಮನೆಯ ದೊಡ್ಡಮ್ಮಳ ಮಗ ಅಣ್ಣ ಸಿದ್ದಪ್ಪನಿಗೂ ಕಲಬುರ್ಗಿಯವರಿಗೂ ಮನಸ್ತಾಪ ಉಂಟಾಗಿ ತಮ್ಮ ಸಾಲಿಯ ಟ್ರಂಕು ಹೊತ್ತುಕೊಂಡು ಯರಗಲಿಗೆ ಬರುತ್ತಾರೆ. ಆಗ ಶಿಕ್ಷಕರಾಗಿದ್ದ ಇನ್ನೊಬ್ಬ ಅಣ್ಣ ಶಾಂತಪ್ಪನವರು ಕಲಬುರ್ಗಿಯವರನ್ನು ಸಮಾಧಾನಪಡಿಸಿ ಮತ್ತೆ ಸಿಂದಗಿಗೆ ಬಂದು ಓದಲು ಕಳುಹಿಸಿಕೊಡುತ್ತಾರೆ. ಮತ್ತು ಶಾಲೆಯ ಎಲ್ಲ ಖರ್ಚನ್ನು ನೋಡಿಕೊಳ್ಳುತ್ತಾರೆ. ಈ ಸಲ ಸಿಂದಗಿಯಲ್ಲಿ ಮುಂಡೋಡಗಿ "ಪುತಳಮ್ಮ" ಎಂಬ ಅಜ್ಜಿಯ ಮನೆಯಲ್ಲಿದ್ದುಕೊಂಡು ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸುತ್ತಾರೆ. ಈ ಪುತಳಮ್ಮಜ್ಜಿಯು ತಮ್ಮ ಮಕ್ಕಳೋಪಾದಿಯಲ್ಲಿ ಇವರನ್ನು ಅತ್ಯಂತ ವಾತ್ಸಲ್ಯದಿಂದ ನೋಡಿಕೊಳ್ಳುತ್ತಾಳೆ. ಸೂಕ್ಷ್ಮ ಮನಸ್ಸಿನ ಕಲಬುರ್ಗಿಯವರು ಅಜ್ಜಿಗೆ ಬಹಳ ಭಾರವಾಗಬಾರದೆಂದು ಸಜ್ಜಿ ರೊಟ್ಟಿಯ ತುಣುಕುಗಳ ಜೊತೆ ಬೆಲ್ಲ ಕಡಿದುಕೊಂಡು ತಿನ್ನುತ್ತ ಹಸಿವನ್ನು ಹಿಂಗಿಸಿಕೊಳ್ಳುತ್ತಿದ್ದರಂತೆ ಹೈಸ್ಕೂಲ ಅಭ್ಯಾಸದ ದಿನಗಳಲ್ಲಿ ಕಲಬುರ್ಗಿಯವರು ತುಂಬಾ ಕ್ರಿಯಾಶೀಲರೂ, ಚತುರಮತಿಗಳೂ ಆಗಿದ್ದ ರೆಂದು ಅವರ ಸಹಪಾಠಿಗಳು ಇಂದಿಗೂ ನೆನಪಿಸಿಕೊಳ್ಳುತ್ತಾರೆ. ಪ್ರಾಥಮಿಕ ಶಾಲೆಯ ಗಣೇಶ ಉತ್ಸವವಾಗಲಿ ಹೈಸ್ಕೂಲಿನ ವಾರ್ಷಿಕೋತ್ಸವವಾಗಲಿ ಕಲಬುರ್ಗಿಯವರು ಅಲ್ಲಿಯ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿದ್ದರು. ಸಾಂಘಿಕವಾಗಿ ಗೆಳೆಯರನ್ನು ಕಟ್ಟಿಕೊಂಡು ಏಕಾಂಕ ನಾಟಕಗಳ ಪ್ರದರ್ಶನ ಮಾಡುವುದರೊಂದಿಗೆ ಅವುಗಳಲ್ಲಿ ಪಾತ್ರಗಳನ್ನು ಕಲಬುರ್ಗಿಯವರು ವಹಿಸುತ್ತಿದ್ದರು. ತಮ್ಮ ಮೆಟ್ರಿಕ್

ಪರೀಕ್ಷೆಯನ್ನು ಪ್ರಥಮ ಶ್ರೇಣಿಯಲ್ಲಿ ಬಂದಾಗ ಸಂತೋಷವನ್ನು ಹಂಚಿಕೊಳ್ಳಲು ಅಪ್ಪ ಇದ್ದ ಹೊಲಕ್ಕೆ ಹೋಗುತ್ತಾರೆ ತಂದೆಗೆ ಕಲಬುರ್ಗಿಯವರು ಪರೀಕ್ಷೆಯ ಫಲಿತಾಂಶದ ಪರಿಣಾಮದ ವಿಷಯ ಹೇಳಿದರಂತೆ ಅದನ್ನು ಕೇಳಿದ ತಂದೆಯವರು ಹಾಗೆಯೇ ಮಗನ ತಲೆಯ ಮೇಲೆ ಮೇವಿನ ಹೊರೆಯನ್ನು ಹೊರಸಿಕೊಂಡು ಮನೆಗೆ ಬಂದರಂತೆ . ಎಂಬ ವಿಷಯವನ್ನು ಡಾ. ಕಲಬುರ್ಗಿಯವರು ಅನೇಕ ಸಂದರ್ಭದಲ್ಲಿ ಹೇಳಿದ್ದುಂಟು. ಕಲಬುರ್ಗಿಯವರ ತಂದೆಯವರ ಶ್ರಮ ಸಂಸ್ಕೃತಿಯ ಪ್ರಾಮಾಣಿಕ ಪರಿಶ್ರಮ ಜೀವಿಗಳಾಗಿದ್ದರು. "ಅಂಬಲಿ ಕಂಬಳಿ ಆಸ್ತಿ ; ಮಿಕ್ಕದೆಲ್ಲಾ ಜಾಸ್ತಿ" ಎಂಬ ತತ್ವ ಸಿದ್ಧಾಂತವನ್ನು ತಮ್ಮ ಬದುಕಿನಲ್ಲಿ ರೂಢಿಸಿಕೊಂಡ ಮಡಿವಾಳಪ್ಪನವರು ಮಡಿವಾಳಪ್ಪನವರ ಮಾರ್ಗದರ್ಶನದಲ್ಲಿ ಬೆಳೆದ ಕಲಬುರ್ಗಿಯವರು ದುಡಿಮೆಯನ್ನು ಉಸಿರಾಗಿಟ್ಟುಕೊಂಡು ಮಹಾನ್ ಸಾಧನೆಗಳನ್ನು ಈಡೇರಿಸಿಕೊಂಡರು.

## ಡಾ. ಎಂ.ಎಂ. ಕಲಬುರ್ಗಿಯವರ ಉನ್ನತ ಶಿಕ್ಷಣ :

ಕಲಬುರ್ಗಿಯವರು ಕಾಲೇಜು ಶಿಕ್ಷಣವನ್ನು ಪಡೆಯಲು ಜಿಲ್ಲಾ ಸ್ಥಳವಾದ ವಿಜಯಪುರಕ್ಕೆ ಬಂದರು. ಬಿ.ಎ. ಪದವಿ ವರ್ಗದಲ್ಲಿ ಕನ್ನಡ ಪ್ರಧಾನ ವಿಷಯವನ್ನಾಗಿ ಆಯ್ಕೆ ಮಾಡಿಕೊಂಡು ಬಿ.ಎಲ್.ಡಿ. ಸಂಸ್ಥೆಯ ವಿಜಯ ಕಾಲೇಜಿನ (ಈಗಿನ ಕೆ.ಸಿ.ಸಿ. ಸೈನ್ಸ್ ಮತ್ತು ಎಸ್.ಬಿ. ಆರ್ಟ್ ಕಾಲೇಜಿನಲ್ಲಿ ಪ್ರವೇಶ ಪಡೆದುಕೊಂಡರು ಇಲ್ಲಿ ಕಲಬುರ್ಗಿಯವರು ಶೈಕ್ಷಣಿಕ ಅಭಿವೃದ್ಧಿಗೆ ಪ್ರಭಾವ ಮತ್ತು ಪ್ರೇರಣೆ ನೀಡಿದವರಲ್ಲಿ ಸಮರ್ಥ ಪ್ರಾಧ್ಯಾಪಕರಾದ ಪ್ರೊ. ಬಿ.ಟಿ. ಸಾಸನೂರು ಪ್ರಮುಖರು. ಪ್ರೊ. ಬಿ.ಟಿ. ಸಾಸನೂರ ಅವರ ವಿದ್ಯಾರ್ಥಿಯಾಗಿರುವುದೇ ನನ್ನ ಜೀವನದ ಭಾಗ್ಯವೆಂದು ಕಲಬುರ್ಗಿಯವರು ಹೇಳುತ್ತಾರೆ. ಈ ಅವಧಿಯಲ್ಲಿ ಕಲಬುರ್ಗಿಯವರು ಶೈಕ್ಷಣಿಕ ಖರ್ಚನ್ನು ಅಣ್ಣನಾದ ಶಾಂತಪ್ಪ ಮಾಸ್ತರರೆ ನೋಡಿಕೊಳ್ಳುತ್ತಾರೆ. ಕಾಲೇಜಿನಲ್ಲಿ ಪ್ರತಿಭಾವಂತರಾಗಿ ಅಭ್ಯಾಸಿಗಳಾದ ಕಲಬುರ್ಗಿಯವರು ಬಿ.ಎ. ಪರೀಕ್ಷೆಯಲ್ಲಿ ಅತ್ಯಧಿಕ ಅಂಕಗಳನ್ನು ಪಡೆದುಕೊಂಡು ಪ್ರಥಮ ರ್‍ಯಾಂಕ ಪಡೆದುಕೊಂಡು ೧೯೬೦ ರಲ್ಲಿ ಬಿ.ಎ. ಪದವಿ ಶಿಕ್ಷಣವನ್ನು ಪೂರ್ಣಗೊಳಿಸಿದರು.

## ಸ್ನಾತಕೋತ್ತರ ಶಿಕ್ಷಣ :

ಕಲಬುರ್ಗಿಯವರು ಬಿ.ಎ. ಪದವಿ ಪರೀಕ್ಷೆಯಲ್ಲಿ ಕನ್ನಡ ವಿಷಯದಲ್ಲಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸರ್ವ ಪ್ರಥಮವಾಗಿ ಪಾಸಾದರು ಮುಂದಿನ ವಿದ್ಯಾಭ್ಯಾಸಕ್ಕಾಗಿ ಅಂದರೆ ಸ್ನಾತಕೋತ್ತರ ವ್ಯಾಸಂಗಕ್ಕೆ ಅಂದಿನ ದಿನಗಳಲ್ಲಿ ಕೆಲವರು ಮುಂಬಯಿ, ಪುಣೆಗಳಿಗೆ ಕೆಲವರು ಧಾರವಾಡಕ್ಕೆ ಹೋಗುತ್ತಿದ್ದರು. ಕಲಬುರ್ಗಿಯವರು ಸಮೀಪದ ಧಾರವಾಡವನ್ನೇ ಆಯ್ಕೆ ಮಾಡಿಕೊಳ್ಳುತ್ತಾರೆ. ಎಂ.ಎ. ಕನ್ನಡ ಪದವಿ ಅಭ್ಯಾಸಕ್ಕಾಗಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಪ್ರವೇಶ ಪಡೆಯುತ್ತಾರೆ. ಬಿ.ಎ. ಪರೀಕ್ಷೆಯಲ್ಲಿ ಅತೀಹೆಚ್ಚಿನ ಅಂಕಗಳನ್ನು ಪಡೆದ ಕಾರಣವಾಗಿ ಕಲಬುರ್ಗಿಯವರಿಗೆ ವಿಶ್ವವಿದ್ಯಾಲಯ

ಧನಸಹಾಯ ಆಯೋಗದ (ಯು.ಜಿ.ಸಿ.) ಫೆಲೋಸಿಫ್ ದೊರೆಯುತ್ತದೆ. ನಿಜಲಿಂಗಪ್ಪ ಹಾಸ್ಟೇಲಿನಲ್ಲಿದ್ದುಕೊಂಡು ಇರಳನ್ನೇ ಹಗಲು ಮಾಡಿ ಸತತವಾದ ಅಭ್ಯಾಸದೊಂದಿಗೆ ಎಂ.ಎ. ಅಧ್ಯಯನದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳುತ್ತಾರೆ. ತತ್ಪಲವಾಗಿ ೧೯೬೨ನೆಯ ವರ್ಷ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಪ್ರಪ್ರಥಮವಾಗಿ ಪಾಸು ಆಗುವುದರೊಂದಿಗೆ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ ವಿಷಯದಲ್ಲಿ ಶೇಕಡಾ ೭೨% ಫಲಿತಾಂಶವನ್ನು ಪಡೆಯುವುದರೊಂದಿಗೆ ವಿಶ್ವವಿದ್ಯಾಲಯದಲ್ಲಿ ದಾಖಲೆಯನ್ನು ಸ್ಥಾಪಿಸಿದ ಶೈಕ್ಷಣಿಕ ಹೆಗ್ಗಳಿಕೆಗೆ ಕಲಬುರ್ಗಿಯವರು ಪಾತ್ರರಾಗುತ್ತಾರೆ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕಲಬುರ್ಗಿಯವರು ಸೃಷ್ಟಿಸಿದ ದಾಖಲೆಯನ್ನು ಇದುವರೆಗೆ ಯಾರೂ ಮುರಿದಿಲ್ಲ ಎಂಬುದು ಅವರ ಶೈಕ್ಷಣಿಕ ಶ್ರೇಷ್ಠತೆಗೆ ಸಾಕ್ಷಿಯಾಗಿದೆ.

ಡಾ. ಕಲಬುರ್ಗಿಯವರು ಅಭ್ಯಾಸ ಮಾಡುವ ಶೈಲಿ ವಿಶಿಷ್ಟವಾಗಿತ್ತು. ವಿಷಯವನ್ನು ನೆನಪಿನಲ್ಲಿಟ್ಟುಕೊಳ್ಳುವುದಕ್ಕಾಗಿ ಯಾವುದೇ ವಿಷಯವನ್ನು ಸಂಕ್ಷಿಪ್ತಗೊಳಿಸುವ ಒಂದು ಉಪಾಯವನ್ನು ಅವರು ಕಂಡು ಹಿಡಿದಿದ್ದರು. ಅದು ವಿಷಯದ ಪದಗಳನ್ನು ಪದ್ಯಗೊಳಿಸುವುದು . ಅವರು ಎಂದೂ ಸುಮ್ಮನಿರುತ್ತಿರಲಿಲ್ಲ. ಕಣ್ಣು ಓದುತ್ತಿತ್ತು. ತಪ್ಪಿದರೆ ಕೈ ಬರೆಯುತ್ತಿತ್ತು ತಪ್ಪಿದರೆ ನಾಲಿಗೆ ಪದ್ಯವನ್ನು ಗುನುಗುನಿಸುತ್ತಿತ್ತು. ಕಲಬುರ್ಗಿಯವರು ಪಂಪ ಭಾರತ, ಭರತೇಶ ವೈಭವ, ಕುಮಾರ ವ್ಯಾಸಭಾರತ ಮುಂತಾದ ಕನ್ನಡ ಮಹಾಕಾವ್ಯಗಳ ಉತ್ತಮೋತ್ತಮ ಪದ್ಯಗಳನ್ನು ತಮ್ಮ ಸಹಪಾಠಿಗಳಿಗೆ ಮುಖೋದ್ಗತವಾಗಿ ಹೇಳಿ ಖುಷಿ ಪಡಿಸುತ್ತಿದ್ದರು. ಶಬ್ದಮಣಿ ದರ್ಪಣದಂತಹ ಶುಷ್ಕ ವ್ಯಾಕರಣ ಗ್ರಮಥ ಬಹುಭಾಗ ಅವರಿಗೆ ಕಂಠಸ್ಥವಾಗಿದ್ದಿತು. ವಿಷಯ ಯಾವುದೇ ಇರಲ್ಲಿ ಅದನ್ನು ಓದಿ ಅರ್ಥೈಸಿಕೊಂಡು ತಮ್ಮದನ್ನಾಗಿಸಿಕೊಳ್ಳುವಲ್ಲಿ ಅವರಿಗೆ ತನ್ಮಯತೆ ಯಾವುದೇ ವಿಷಯುವನ್ನು ತಲಸ್ಪರ್ಶಿಯಾಗಿ ಕುಶಾಗ್ರಮತಿಯಿಂದ ಗುರುತಿಸಿ ವಿವೇಚನೆಯ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸಿ ಸ್ವೀಕರಿಸುತ್ತಿದ್ದರು. ಅದರ ಜ್ಞಾನವನ್ನು ತಮ್ಮದಾಗಿಸಿಕೊಳ್ಳುತ್ತಿದ್ದರು. ಅವರ ಲಕ್ಷ್ಯ ಸದಾ ವಿಷಯವನ್ನು ಪರಿಪೂರ್ಣವಾಗಿರಿಸಿಕೊಳ್ಳುವುದರಲ್ಲಿಯೆ ಕೇಂದ್ರಿಕೃತವಾಗಿರುತ್ತಿತ್ತು. ಕಲಬುರ್ಗಿಯವರ ಸ್ಮರಣೆಯ ಶಕ್ತಿ ಅದ್ಭುತವಾಗಿತ್ತು. ಅವರ ಕಂಠದಿಂದ ವಿಷಯದ ವಿವರಣಾತ್ಮಕ ಶೈಲಿಯು ಪ್ರವಾಹದಂತೆ ಓತ ಪ್ರೋ ಧಾರಾಕಾರದ ಮಳೆಯಂತೆ ಸುರಿಯುತ್ತಿತ್ತು. ಅವರಲ್ಲಿ ಕನ್ನಡ ನಾಡು ನುಡಿಯ ಸಾಂಸ್ಕೃತಿಕ ರಾಯಭಾರಿಯೊಬ್ಬ ನಿರ್ಮಾಣವಾಗುತ್ತಿದ್ದನ್ನು ಅವರ ಸಮಕಾಲೀನ ಸಹಪಾಠಿಗಳು ಗುರುತಿಸಿದ್ದರು. ಕನ್ನಡ ಅಧ್ಯಯನ ಪೀಠದಲ್ಲಿ ಕಲಬುರ್ಗಿಯವರಿಗೆ ದೊರೆತ ಡಾ. ಆರ್.ಸಿ. ಹಿರೇಮಠ ಅವರಂಥ ಮಹಾನ್ ವಿದ್ವಾಂಸರ ಶಿಷ್ಯತ್ವ ದೊರೆತ ಫಲವಾಗಿ ದೇಶದ ಮಹಾನ್ ಸಂಶೋಧಕನೊಬ್ಬ ಸೃಷ್ಟಿಯಾಗಲು ಸಾಧ್ಯವಾಯಿತೆಂದು ಕಲಬುರ್ಗಿಯವರು ವಿನಮ್ರವಾಗಿ ನೆನಪಿಸಿಕೊಳ್ಳುತ್ತಾರೆ. ತಮ್ಮ ಶೈಕ್ಷಣಿಕ ಸಾಧನೆಯ ಎಲ್ಲ ಶ್ರೇಯಸ್ಸುಗಳ ಹಿಂದೆ ಡಾ. ಆರ್.ಸಿ. ಹಿರೇಮಠ ಅವರ ಮಾರ್ಗದರ್ಶನ ಕೈ ಹಿಡಿದು ನಡೆಸಿದೆ ಎಂದು ಹೇಳಿಕೊಂಡಿದ್ದಾರೆ.

ಡಾ. ಎಂ.ಎಂ. ಕಲಬುರ್ಗಿಯವರ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರಿದವರಲ್ಲಿ ಪ್ರೊ. ಬಿ.ಟಿ. ಸಾಸನೂರ ಡಾ. ಫ.ಗು. ಹಳಕಟ್ಟಿ ಹಾಗೂ ಡಾ. ಆರ್.ಸಿ. ಹಿರೇಮಠ ಅವರು ಪ್ರಮುಖರು ಬಾಲ್ಯದಲ್ಲಿಯೇ ತಮ್ಮ ಮನೆಗೆ ಬರುತ್ತಿದ್ದ ಡಾ. ಫ.ಗು. ಹಳಕಟ್ಟಿಯವರ "ಶಿವಾನುಭವ' ಪತ್ರಿಕೆಯ ಮೇಲಿನ ಕೆಲಸ ಮಾಡುವವ ಮನಸ್ಸು ಶುದವಾಗಿರುತ್ತದೆ. ಎಂಬ ವಾಕ್ಯ ಡಾ. ಕಲಬುರ್ಗಿಯವರನ್ನು ಕ್ರಿಯಾಶಕ್ತಿಯ ವ್ಯಕ್ತಿಯನ್ನಾಗಿ ರೂಪಿಸಿದುದು ಮಹತ್ವದ ಸಂಗತಿ. ಡಾ. ಕಲಬುರ್ಗಿಯವರು ತಮ್ಮ ಅನೇಕ ಭಾಷಣಗಳಲ್ಲಿ ಕೆಲಸ ಮಾಡುವುದನ್ನು ಬಿಟ್ಟರೆ ನನಗೆ ಬೇರೆ ಕೆಲಸವೇ ಇಲ್ಲ" ಎಂದು ನೂರಾರು ಸಲ ಉಲ್ಲೇಖಿಸಿದ್ದರು. ತಾವು ದುಡಿಯುವುದರೊಂದಿಗೆ ತಮ್ಮೊಂದಿಗೆ ಇದ್ದವರನ್ನು ದುಡಿಸುವುದರೊಂದಿಗೆ ಅನೇಕ ಕಾಯಕಲ್ಪಗಳ ಮೂಲಕ ಕರ್ನಾಟಕದ ಸಾಹಿತ್ಯ ಸಂಸ್ಕೃತಿಯನ್ನು ಮಹಾಮನೆ ಕಟ್ಟಿದ ಮಹಾಶಿಲ್ಪಿಗಳು.

## ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕನಾಗಿ ಸೇವೆ :

೧೯೬೦ ರಲ್ಲಿ ಡಾ. ಕಲಬುರ್ಗಿಯವರು ವಿಜಯಪುರದ ಬಿ.ಎಲ್.ಡಿ. ಸಂಸ್ಥೆಯ ವಿಜಯ ಕಾಲೇಜಿನಿಂದ ಬಿ.ಎ. ಪದವಿಯನ್ನು ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದನಂತರ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಎಂ.ಎ. ಪ್ರವೇಶ ಪಡೆದರು. ಮೊದಲಿನಿಂದಲೂ ಪ್ರತಿಭೆ ಪರಿಶ್ರಮ ಅಭ್ಯಾಸಗಳ ಸಂಗಮವೆನಿಸಿದ ಡಾ. ಕಲಬುರ್ಗಿಯವರು ಬಿ.ಎ. ಪರೀಕ್ಷೆಯಲ್ಲಿ ಅತೀ ಹೆಚ್ಚಿನ ಅಂಕಗಳನ್ನು ಪಡೆದ ಕಾರಣವಾಗಿ ಕಲಬುರ್ಗಿಯವರಿಗೆ ಯು.ಜಿ.ಸಿ. ಫೆಲೋಶಿಫ್ ದೊರೆಯುತ್ತಿದೆ. ನಿಜಲಿಂಗಪ್ಪ ಹಾಸ್ಟೇಲಿನಲ್ಲಿದ್ದುಕೊಂಡು ಇರುಳನ್ನೇ ಹಗಲು ಮಾಡಿ ಎಂ.ಎ. ಅಧ್ಯಯನದಲ್ಲಿ ತೊಡಗಿ ಪ್ರಥಮ ದರ್ಜೆ ಪ್ರಥಮ ರ್‍ಯಾಂಕ್‌ದೊಂದಿಗೆ ಜಯ ಚಾಮರಾಜ ಒಡೆಯರ ಪಾರಿತೋಷಕ ಗೌರವಕ್ಕೆ ಪಾತ್ರರಾಗುತ್ತಾರೆ. ೧೯೬೨ ರಲ್ಲಿ ಎಂ.ಎ ಪದವಿಯನ್ನು ಪ್ರಶಸ್ತಿ ಸಹಿತ ಪ್ರಥಮ ಶ್ರೇಣಿಯನ್ನು ಗಳಿಸಿಕೊಂಡರು. ಕನ್ನಡ ವಿಭಾಗದ ಡಾ.ಆರ್.ಸಿ. ಹಿರೇಮಠ ಅವರ ಪ್ರೀತಿಯ ಗುರುಗಳಾಗಿ ತಮ್ಮ ವಿದ್ವತ್ತಿನ ಜ್ಞಾನಾಮೃತವನ್ನು ನೆಚ್ಚಿನ ವಿದ್ಯಾರ್ಥಿಗಳಿಗೆ ಧಾರೆಯೆರೆದರು. ಗುರುಗಳ ಸಮರ್ಥ ಮಾರ್ಗದರ್ಶನ ಕಲಬುರ್ಗಿಯವರ ಪ್ರತಿಭೆ ಪರಿಶ್ರಮ ಪ್ರಯತ್ನಗಳಿಂದ ಮುಪ್ಪರಿಗೊಂಡ ಸ್ವಸಾಮರ್ಥ್ಯ ಬಲದೊಂದಿಗೆ ಅವರೊಬ್ಬ ಸಶಕ್ತ ಮಾದರಿಯ ಆದರ್ಶವಿದ್ಯಾರ್ಥಿಯಾಗಿ ಹೊರಹೊಮ್ಮಿದರು.

ಎಂ.ಎ. ಅಧ್ಯಯನ ಮುಗಿಯುತ್ತಲೇ ವಿಶ್ವವಿದ್ಯಾಲಯದಲ್ಲಿಯೇ ಕಲಬುರ್ಗಿಯವರಿಗೆ ಕೆಲಸ ಕೈ ಮಾಡಿ ಕರೆಯಿತು. ಕನ್ನಡ ವಿಭಾಗದಲ್ಲಿ ಆಗತಾನೆ ಆರಂಭವಾಗಿದ್ದ "ಸಮಗ್ರ ವಚನ ವಾಙ್ಮಯ ಸಂಶೋಧನ ಸಂಸ್ಕರಣ ಪ್ರಕಟಣ ಯೋಜನೆ"ಯಲ್ಲಿ ಸಹಾಯಕ ಸಂಶೋಧಕರಾಗಿ ೧೯೬೨ ರಲ್ಲಿ ವೃತ್ತಿ ಜೀವನ ಆರಂಭಿಸಿದರು. ಕೆಲವೇ ದಿವಸಗಳಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕರ್ನಾಟಕ ಕಲಾ ಮಹಾವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕರಾಗಿ ಸೇವೆ ಪ್ರಾರಂಭಿಸಿದರು. ಡಾ.

ಕಲಬುರ್ಗಿಯವರು ಕರ್ನಾಟಕ ಕಾಲೇಜಿನಲ್ಲಿ ಗ್ರಂಥಾಲಯದಲ್ಲಿ ಸತತ ಅಭ್ಯಾಸಿಗಳಾಗಿದ್ದರು. ಜ್ಞಾನದ ಹಸಿವಿನಲ್ಲಿ ಕಲಬುರ್ಗಿಯವರ ಅಧ್ಯಯನವನ್ನು ಕುರಿತು "ಕಲಬುರ್ಗಿಯವರು ಗ್ರಂಥಾಲಯದಲ್ಲಿ ಒಂದೊಂದು ಪುಸ್ತಕವನ್ನು ಓದುವುದಿಲ್ಲ, ಒಂದೊಂದು ಕಪಾಟನ್ನು ಓದುತ್ತಾರೆ" ಎಂಬ ಮಾತು ವಿದ್ಯಾರ್ಥಿ ಲೋಕದಲ್ಲಿ ಕೇಳಿ ಬರುತ್ತಿತ್ತು. ಕಲಬುರ್ಗಿಯವರು ತಮ್ಮ ಸತತಾಭ್ಯಾಸ ಪ್ರವೃತ್ತಿ ಪ್ರಭಾವ ಪೂರ್ಣ ಪಾಠ ಬೋಧನೆ, ಶಿಸ್ತಿನ ನಡೆ ನುಡಿಗಳಿಂದ ವಿದ್ಯಾರ್ಥಿಗಳ ಸಹೋದ್ಯೋಗಿಗಳ ವಿಶೇಷ ಪ್ರೀತಿ ಗೌರವಗಳಿಗೆ ಪಾತ್ರರಾದರು. ೧೯೬೨ ರಿಂದ ೧೯೬೬ ರ ನಾಲ್ಕು ವರ್ಷಗಳ ಕಾಲ ಕನ್ನಡ ಅಧ್ಯಾಪಕಾಗಿ ಸೇವೆ ಸಲ್ಲಿಸಿದರು.

**ಕನ್ನಡ ಅಧ್ಯಯನ ಪೀಠದ ಪ್ರಾಧ್ಯಾಪಕರು :**

ಡಾ. ಎಂ.ಎಂ. ಕಲಬುರ್ಗಿ ಅವರು ಒಬ್ಬ ಮಾದರಿಯ ಪ್ರಾಧ್ಯಾಪಕರಾಗಿದ್ದರು. ವಿದ್ಯಾರ್ಥಿಗಳ ಜ್ಞಾನ ಕ್ಷಿತಿಜವನ್ನು ನಿತ್ಯ ವಿಸ್ತರಿಸುವ ಮಹಾ ಜ್ಞಾನ ದಾಸೋಹಿಗಳಾಗಿದ್ದರು. ಆಳವಾದ ಅಧ್ಯಯನ ಗಂಭೀರ ಚಿಂತನ, ಪ್ರಖರವಾದ ವೈಚಾರಿಕತೆ ಸಂವಹನ ಶೀಲ ಆಕರ್ಷಕ ನಿರೂಪಣೆ ಶೈಲಿಯಿಂದ ಕೂಡಿದ ಅವರ ವರ್ಗ ಬೋಧನೆ ಕೇಳುವುದೇ ಒಂದು ಸೊಬಗು, ವಿದ್ಯಾರ್ಥಿಗಳನ್ನು ಮಂತ್ರ ಮುಗ್ದಗೊಳಿಸುವ ಬೆರಗುಗೊಳಿಸುವ ತನ್ಮಯತೆಯನ್ನುಂಟು ಮಾಡುವ ಅವರ ಪಾಠ ಬೋಧನೆಯ ರೀತಿ ಅವರಿಗೆ ಮಾತ್ರ ಸಿದ್ಧಸಿದ ಒಂದು ಅಪೂರ್ವ ಕಲೆಯಾಗಿ ಭಾಷೆಯ ವೈವಿಧ್ಯ ನೆಲೆಗಳನ್ನು ಸ್ಪರ್ಶಿಸಿ ವಿದ್ಯಾರ್ಥಿಗಳ ಮೈ ಮನಗಳನ್ನು ರೋಮಾಂಚನಗೊಳಿಸುವ ಕಲಬುರ್ಗಿಯವರ ಬೋಧನಾ ಕೌಶಲ್ಯವು ಕುತೂಹಲ ಕೌತುಕಗಳನ್ನು ಒಳಗೊಂಡ ರಸಾವೇಶ ಸನ್ನಿವೇಶಗಳ ರಸದೌತಣವಾಗಿರುತಿತ್ತು. ಪಂಪ ಮಹಾಭಾರತ ಶರಣರ ವಚನ ತತ್ವ ಚಿಂತನ, ಶಾಸನ ಪಾಠಗಳ ವಿಷಯ ನಿಷ್ಠ ವ್ಯಾಖ್ಯಾನ ಮುಖಿ ವಿಶ್ಲೇಷಣೆ ಪದ್ಯವಾಚನ ಗದ್ಯದ ಓದು, ಮಾರ್ಗ-ದೇಶಿ-ಗದ್ಯ-ಪಾಠಗಳ ಕಲಬುರ್ಗಿಯವರ ಓದುವಿಕೆ ವಿಶೇಷ ಸೊಬಗನ್ನು ಒಳಗೊಂಡಿರುತ್ತಿತ್ತು. ಅದೊಂದು ಜ್ಞಾನ ಬೆಳಕಿನ ಸ್ನಾನದ ಮಹಾಮಜ್ಜನವಾಗಿರುತಿತ್ತು.

**ಕುಟುಂಬವತ್ಸಲರು :**

೧೯೬೬ ರಲ್ಲಿ ಮುದ್ದೇಬಿಹಾಳದ ನಾಗಠಾಣ ಮನೆತನದವರ ಮಗಳಾದ ಸೌ. ಉಮಾದೇವಿಯವರನ್ನು ಕಲಬುರ್ಗಿಯವರು ತಮ್ಮ ಬಾಳ ಸಂಗಾತಿಯನ್ನಾಗಿ ಮಾಡಿಕೊಳ್ಳುತ್ತಾರೆ. ಗುಣಸ್ವಭಾವಗಳ ಮಧುರ ಬಾಂಧವ್ಯದೊಂದಿಗೆ ಸಂತೃಪ್ತಿ ಬದುಕಿನ ಸಂಸಾರ ಕಲಬುರ್ಗಿಯವರದು ಡಾ. ಕಲಬುರ್ಗಿಯವರಿಗೆ ಒಟ್ಟು ನಾಲ್ಕು ಜನ ಮಕ್ಕಳು. ಮೊದಲನೆಯವರು ಪೂರ್ಣಿಮಾ ಎಂಬುವರು ಇವರಿಗೆ ಸ್ನಾತಕ ಪದವಿ ಹಂತದವರೆಗೂ ಶಿಕ್ಷಣ ಕೊಡಿಸಿ ವಿಜಯಪುರ ಜಿಲ್ಲೆಯ ಇಂಡಿ ತಾಲೂಕಿನ ತಾಂಬಾ ಗ್ರಾಮದ ಅಳಗುಂಡಗಿ ಎಂಬ ಶ್ರೀಮಂತ ಮನೆತನದವರೊಂದಿಗೆ ಬಾಂಧವ್ಯ ಬೆಳೆಸಿದ್ದಾರೆ.

ಎರಡನೆಯವರು ಪ್ರತಿಮಾ ಇವರನ್ನು ಶ್ರೀಮತಿ ಉಮಾದೇವಿಯವರ ತಮ್ಮನಿಗೆ ಕೊಟ್ಟು ಮದುವೆ ಮಾಡುತ್ತಾರೆ. ಮೂರನೆಯವರೇ ಗಂಡು ಮಗನಾದ ಶ್ರೀವಿಜಯ . ಇವರು ಎಂ.ಎ. ಇಂಗ್ಲೀಷ ಅಧ್ಯಯನವನ್ನು ಮಾಡಿಕೊಂಡು ಸದ್ಯ ಬೆಂಗಳೂರಿನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಕಲಬುರ್ಗಿಯವರ ಕೊನೆಯ ಮಗಳು ರೂಪದರ್ಶಿ ಇವರು ಸ್ನಾತಕೋತ್ತರ ಪದವಿಯವರೆಗೂ ಶಿಕ್ಷಣ ಪೂರೈಸಿದ್ದಾರೆ. ತಾಳಿಕೋಟೆಯ 'ಕಿಣಗಿ' ಮನೆತನದ ಸಂಗನಬಸವನ ಜೊತೆ ಮದುವೆ ಮಾಡುತ್ತಾರೆ. ಅವಿಭಕ್ತ ಕುಟುಂಬದ ಹಿನ್ನಲೆಯಲ್ಲಿ ಬೆಳೆದ ಕಲಬುರ್ಗಿಯವರು ಕುಟುಂಬ ವತ್ಸಲರಾಗಿರುವಂತೆ "ವಸುದೈವ ಕುಟುಂಬಕಂ" ತತ್ವದ ಮಾನವತೆಯ ಅನುಯಾಯಿಗಳು ಆಗಿದ್ದರು.

### ಸಮಗ್ರ ಕ್ಷೇತ್ರಗಳ ಸಂಶೋಧಕರು :

ಡಾ. ಎಂ.ಎಂ. ಕಲಬುರ್ಗಿಯವರು ಒಬ್ಬ ಶ್ರೇಷ್ಠ ಪ್ರಾಧ್ಯಾಪಕರಾಗಿರುವುದು ಜೊತೆ ಜೊತೆಯಲ್ಲಿ ಪಾಂಡಿತ್ಯ ಪರಂಪರೆಯ ಪ್ರಥಮ ಶ್ರೇಣಿಯ ಸಂಶೋಧಕರು ಆಗಿದ್ದರು. ಸಂಶೋಧನಾ ಕ್ಷೇತ್ರಕ್ಕೆ ಅವರ ಕಾರ್ಯ ಕ್ಷೇತ್ರವೇ ಪಥ್ಯವು ಆಗುವದರೊಂದಿಗೆ, ಅವರೇ ಮಾರ್ಗದರ್ಶಕರಾಗಿರುತ್ತಿದ್ದರು. ದಿನದ ಇಪ್ಪತ್ನಾಲ್ಕು ಗಂಟೆಗಳನ್ನು ಸಂಶೋಧನೆಗಾಗಿ, ಅವುಗಳ ಹುಡುಕಾಟಕ್ಕಾಗಿ ವಿಷಯಗಳ ಚಿಂತನೆಗಾಗಿ ಬಳಸಿಕೊಳ್ಳುತ್ತಿದ್ದ ಅವರೊಬ್ಬ ಪೂರ್ಣ ಪ್ರಮಾಣದ ಸಂಶೋಧಕರಾಗಿದ್ದರು. ಸಂಶೋಧಕನ ಮನಸ್ಸು ಶೃತಿ ಮಾಡಿಟ್ಟ ವೀಣೆಯಂತೆ ಇರಬೇಕು ಎಂದು ಹೇಳುತ್ತಿದ್ದ ಅವರಿಗೆ ಸ್ವಪ್ನದಲ್ಲಿಯೂ ಅವರಿಗೆ ಸಮಸ್ಯೆಗಳು ಕಾಡುತ್ತಿದ್ದವು. ಕಾಣುತ್ತಿದ್ದವು. ಯಾವುದೇ ಒಂದು ವಿಷಯವು ಅವರ ಮನಸ್ಸಿನಲ್ಲಿ ಹೊಳೆದಾಗ ಅವರು ಮಧ್ಯರಾತ್ರಿಯಲ್ಲಿಯೇ ಕೆಲವು ಸಲ ಎದ್ದು ಕುಳಿತು ಬರೆಯಲು ತೊಡಗಿದ್ದರು. ಪಂಪ ಭಾರತದಲ್ಲಿ ಬರುವ "ಒತ್ತಿ ತರಂಬಿ ನಿಂದ ರಿಪುಭೂಜದ ಬೋರ್ಗಳಂನಭಕ್ಕೆತ್ತದೆ" ಎಂಬ ಪಂಪನ ಮಾತನ್ನು ತಮ್ಮ ಜೀವಿತದ ಅನುಭವದಲ್ಲಿ ನಡೆದ ಸಂಗತಿಯನ್ನು ಹಲವಾರು ಕಡೆ ದಾಖಲಿಸಿದ್ದಾರೆ. "ಸಂಶೋಧನೆಯಲ್ಲಿ ಅವರು ಒಂದು ತಪಸ್ಸನ್ನಾಗಿ ವ್ರತವನ್ನಾಗಿ ಸ್ವೀಕರಿಸಿದ್ದರು. ಅದಕ್ಕಾಗಿ ಅವರೊಬ್ಬ ಸಂಶೋಧನ ಯೋಗಿ ಎನಿಸಿದ್ದರೆಂದು "ಡಾ.ವೀರಣ್ಣ ರಾಜೂರ ತಮ್ಮ ವಿಚಾರಗಳಲ್ಲಿ ದಾಖಲಿಸಿದ್ದಾರೆ.

ಡಾ. ಎಂ.ಎಂ. ಕಲಬುರ್ಗಿ ಅವರ ಸಂಶೋಧನ ಕ್ಷೇತ್ರಗಳ ವಿಷಯುಗಳು ತುಂಬಾ ವೈವಿಧ್ಯಮಯವಾದವುಗಳು ಅವುಗಳ ವ್ಯಾಪ್ತಿ ವಿಸ್ತಾರ ಬಲು ದೊಡ್ಡದು, ಶಾಸನ, ಗ್ರಂಥ ಸಂಅಪದನೆ ಹಸ್ತ ಪ್ರತಿ,ವ್ಯಾಕರಣ, ಛಂದಸ್ಸು , ನಿಘಂಟು , ನಾಮ ವಿಜ್ಞಾನ ಜಾನಪದ ಕೈಪಿಇಡಿಯತ್ತ, ಧರ್ಮ , ವಚನ ಸಾಹಿತ್ಯ ಇತಿಹಾಸ, ಸಮಾಜ, ಸಂಸ್ಕೃತಿ ಹೀಗೆ ಎಲ್ಲ ಜ್ಞಾನ ಶಾಖೆಗಳು ಅವರ ಸಂಶೋಧನಾ ವಲಯದಲ್ಲಿ ಸಮಾವೇಶಗೊಳ್ಳುತ್ತವೆ. ಡಾ. ಕಲಬುರ್ಗಿಯವರು ಯಾವುದೇ ವಿಷಯವನ್ನು ಆಯ್ಕೆ ಮಾಡಿಕೊಂಡರೂ ಅದಕ್ಕೆ ಸಂಬಂಧಿಸಿದ ನೇರವಾದ ಮತ್ತು ಪೂರಕವಾದ ಎಲ್ಲ ಆಕರಗಳನ್ನು ವಿಪುಲವಾಗಿ ಸಂಗ್ರಹಿಸುವುದು. ಸಂಗ್ರಹಿಸಿದ ಸಾಮುಗ್ರಿಯನ್ನು ವ್ಯವಸ್ಥಿತವಾಗಿ ವಿಶ್ಲೇಷಿಸುವುದು ಮತ್ತು

ವ್ಯಾಖ್ಯಾನಿಸುವುದು, ಅದರ ಮೂಲಕ ಹೊರಡುವ ಹೊಸ ಸತ್ಯವನ್ನು ಎತ್ತಿ ಹೇಳುವುದು ಡಾ. ಕಲಬುರ್ಗಿ ಅವರ ಸಂಶೋಧನಾ ವಿಧಾನ ಇದಕ್ಕೆ ಅವರ "ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ" ಪಿ.ಎಚ್.ಡಿ. ಪ್ರಬಂಧ ಒಂದು ಶ್ರೇಷ್ಠ ಉದಾಹರಣೆಯಾಗಿದೆ.

ಆಕರ ಮುಖಿ ಸಂಶೋಧನೆಯಿಂದ ಆರಂಭವಾಗುವ ಅವರ ಸಂಶೋಧನೆ ವಿಶ್ಲೇಷಣಾ ಮುಖಿ, ಸಂಶೋಧನೆಯನ್ನು ದಾಟಿ ವ್ಯಾಖ್ಯಾನ ಮುಖಿ ಸಂಶೋಧನೆವರೆಗೆ ಸಾಗಿ ಬಂದು ಎಲ್ಲ ಹಂತಗಳ ಬೆಳವಣಿಗೆಯಲ್ಲಿ ಡಾ. ಕಲಬುರ್ಗಿಯವರು ಸಕ್ರೀಯವಾಗಿ ತೊಡಗಿಸಿಕೊಳ್ಳುತ್ತಾ ಬಂದಿದ್ದಾರೆ. ಅವರ ಒಟ್ಟು ಸಂಶೋಧನೆಯ ಸ್ವರೂಪವಿಧಾನ ವಿಶೇಷತೆಗಳನ್ನು ಅವರು ಮಾರ್ಗ ಸಂಪುಟಗಳಲ್ಲಿ ಸಂಗ್ರಹಿಸಿದ ಏಳು ನೂರಕ್ಕೂ ಹೆಚ್ಚು ಸಂಪ್ರಬಂಧಗಳು ಸಂಪಾದನಾ ಕೃತಿಗಳಿಗೆ ಬರೆದ ಪ್ರಸ್ತಾವನೆಗಳು ಹಾಗೂ ಇತರ ಸಂಶೋಧನಾ ಕೃತಿಗಳು ತಿಳಿಸಿಕೊಡುತ್ತವೆ.

ವಚನ ಸಾಹಿತ್ಯ ಸಂಪಾದನಾ ಕ್ಷೇತ್ರದಲ್ಲಿ ಡಾ. ಕಲಬುರ್ಗಿ ಅವರು ಮಾಡಿದ ಕಾರ್ಯ ಅದ್ವಿತೀಯವೆನಿಸಿದೆ. ಡಾ. ಫ.ಗು. ಹಳಕಟ್ಟಿ, ಪ್ರೊ. ಶಿ.ಶಿ. ಬಸವನಾಳ, ಹೊಸಹಳ್ಳಿ ಬೂದೀಶ್ವರ ಸಂಸ್ಥಾನ ಮಠದ ಪ್ರಭು ಸ್ವಾಮಿಗಳು, ಡಾ. ಆರ್.ಸಿ. ಹಿರೇಮಠ, ಡಾ. ಎಲ್. ಬಸವರಾಜು, ಪ್ರೊ. ಭೂಸನೂರಮಠ ಮೊದಲಾದವರು ಈ ಕ್ಷೇತ್ರದಲ್ಲಿ ಮಾಡಿದ ಕಾರ್ಯಕ್ಕೆ ಸಮಗ್ರ ವಚನ ಸಾಹಿತ್ಯ ಪ್ರಕಟಣ ಯೋಜನೆಯ ಮೂಲಕ ಪೂರ್ಣ ಸ್ವರೂಪವನ್ನು ತಂದು ಕೊಟ್ಟವರು ಡಾ. ಕಲಬುರ್ಗಿ ಅವರು.

ಸಮಗ್ರ ವಚನ ಸಾಹಿತ್ಯ ಪ್ರಕಟಣೆ ಯೋಜನೆಯ ೧೫ ಸಂಪುಟಗಳಿಂದ ಆಯ್ದ ಎಲ್ಲ ಶರಣರ ಎರಡುವರೆ ಸಾವಿರ ವಚನಗಳನ್ನು ಭಾರತದ ಎಲ್ಲ ಭಾಷೆಗಳಿಗೂ ಅನುವಾದ ಮಾಡುವ ಯೋಜನೆಯನ್ನು ಬಸವ ಸಮಿತಿಯ ಅಡಿಯಲ್ಲಿ ಆರಂಭಿಸಿ ಯಶಸ್ವಿಯಾಗಿ ಪೂರೈಸಿದರು. ಸಮಗ್ರ ವಚನ ಸಾಹಿತ್ಯದ ೧೫ ಸಂಪುಟಗಳ ಮೂರನೇ ಆವೃತ್ತಿಯನ್ನು ಬೈಬಲ್ ಮಾದರಿಯಲ್ಲಿ ಎರಡೇ ಸಂಪುಟಗಳಲ್ಲಿ ಅಳವಡಿಸಲು ಯೋಚಿಸಿ, ಆ ಕಾರ್ಯವನ್ನು ಪೂರ್ಣಗೊಳಿಸಿದರು. ವಚನಗಳನ್ನು ಆಕರವಾಗಿ ಬಳಸಿಕೊಂಡು ಅನೇಕ ಲೇಖನಗಳನ್ನು ರಚಿಸಿ ಲಿಂಗಾಯತ ಧರ್ಮ-ತತ್ವ-ಸಿದ್ಧಾಂತ ಇತಿಹಾಸ. ಸಮಾಜ ಸಂಸ್ಕೃತಿ ಸಾಹಿತ್ಯ ಕುರಿತಂತೆ ಅನೇಕ ನೂತನ ವಿಷಯಗಳ ಮೇಲೆ ಹೊಸ ಬೆಳಕನ್ನು ಬೀರಿದರು. ಲಿಂಗಾಯತ ಧರ್ಮ ಸಾಹಿತ್ಯ ಪಂಪರೆಯ ತಲಸ್ಪರ್ಶಿ ಅಧ್ಯಯನಗಳ ಮೂಲಕ ಅವರೊಬ್ಬ ಅಪರೂಪದ ಆಕರಕೋಶವಾಗಿ ರೂಪಗೊಂಡಿದ್ದರು. ಈ ಕುರಿತು ಯಾವುದೇ ಸಮಸ್ಯೆಗಳಿಗೆ ತಕ್ಷಣ ಪರಿಹಾರ ಸೂಚಿಸುವ ಅಧಿಕೃತವಾಗಿ ಮಾತನಾಡುವ, ಬರೆಯುವ ಪ್ರತಿಕ್ರಿಯಿಸುವ ಅಗಾಧ ಜ್ಞಾನ ಸಂಪತ್ತಿನ ಕಣಜ ಡಾ. ಕಲಬುರ್ಗಿಯವರಾಗಿದ್ದರು. ಡಾ. ಕಲಬುರ್ಗಿಯವರು ಕನ್ನಡ ಸಂಶೋಧನಾ ಕ್ಷೇತ್ರದಲ್ಲಿ ಸಾಧಿಸಿದ ಸಾಧನೆ, ನೀಡಿದ ಕೊಡುಗೆ ಗಣನೀಯವಾದುದು

ಕರ್ನಾಟಕದ ಸಾಂಸ್ಕೃತಿಕ ಇತಿಹಾಸದ ೨೫,೦೦೦ ಶಾಸನಗಳನ್ನು ಓದಬಲ್ಲ ವ್ಯಾಖ್ಯಾನಿಸಬಲ್ಲ ಕೆಲವೆ ಕೆಲವು ಬೆರಳೆಣಿಕೆಯ ಸಂಶೋಧಕರಲ್ಲಿ ಡಾ. ಕಲಬುರ್ಗಿಯವರು ಒಬ್ಬರು. ಕನ್ನಡದ ಸಾವಿರಾರು ಹಸ್ತ ಪ್ರತಿಗಳನ್ನು ಸಂಗ್ರಹಿಸಿ, ಸಂಪಾದಿಸಿ ಪ್ರಕಟಿಸಿ ನಾಡಿಗೆ ನೀಡಿದ ಕಾಯಕ ಯೋಗಿಗಳು ಡಾ.ಕಲಬುರ್ಗಿಯವರು.

ಡಾ. ಕಲಬುರ್ಗಿಯವರ ಬರವಣಿಗೆ ತುಂಬ ಅಚ್ಚುಕಟ್ಟು ಸೂತ್ರ ಬದ್ಧತೆ, ಶಾಸ್ತ್ರ ಶುದ್ಧತೆ ಅವರ ಪ್ರಮುಖ ಲಕ್ಷಣ, ಅರ್ಥ ಸಂಯೋಜನೆಯಯೊಂದಿಗೆ ಸಾಷ್ಠವಭರಿತ ಪದಗಳ ಬಳಕೆ ತೂಕ ಬದ್ದ ವಾಕ್ಯ ರಚನೆ, ಗದ್ಯದಲ್ಲಿಯೂ ಒಂದುಬಗೆಯ ಗೇಯ ಗುಣ, ಶಾಸ್ತ್ರ ರಚನೆಯಲ್ಲಿಯೂ , ಸೃಜನಶೀಲತೆ, ನಿರರ್ಗಳತೆ, ಓದಿದ ತಕ್ಷಣ ಅರ್ಥವಾಗುವುದು ಇದು ಕಲಬುರ್ಗಿ ಅವರ ಬರಹ ಎಂದು ಗುರುತಿಸುವಷ್ಟರ ಮಟ್ಟಿಗೆ ವಿಶಿಷ್ಟತೆ " ಎಂದು ಡಾ. ವೀರಣ್ಣಾ ರಾಜೂರ ಅವರು ಅಭಿಪ್ರಾಯ ಪಡುತ್ತಾರೆ.

**ಡಾ. ಎಂ.ಎಂ. ಕಲಬುರ್ಗಿಯವರ ಆಡಳಿತ :**

ಡಾ. ಕಲಬುರ್ಗಿಯವರು ೧೯೬೨ ರಿಂದ ೧೯೬೬ ರ ವರೆಗೆ ಕರ್ನಾಟಕ ಕಾಲೇಜಿನಲ್ಲಿ ನಾಲ್ಕು ವರ್ಷಗಳ ಕಾಲ ಅಧ್ಯಾಪಕರಾಗಿ ಸೇವೆ ಸಲ್ಲಿಸಿದ ನಂತರ . ೧೯೬೬ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಅಧ್ಯಾಪಕರಾಗಿ ನೇಮಕಗೊಂಡರು. ನಂತರ ೧೯೭೧ ರಲ್ಲಿ ಪ್ರವಾಚಕರಾದರು. ೧೯೮೦ ರಲ್ಲಿ ಅವರು ಪ್ರಾಧ್ಯಾಪಕರಾದದ್ದು ಬಸವೇಶ್ವರ ಅಧ್ಯಯನ ಪೀಠಕ್ಕೆ. ಇದು ಕನ್ನಡ ಅಧ್ಯಯನ ಪೀಠದ ಅಂಗ ಸಂಸ್ಥೆ. ಆದರೆ ಅದನ್ನು ಸ್ವತಂತ್ರವಾಗಿ ಕಾರ್ಯನಿರ್ವಹಿಸುವ ಹೊಣೆಗಾರಿಕೆಯುಳ್ಳ ಮಹತ್ವದ ಶಾಖೆ. ಡಾ. ಕಲಬುರ್ಗಿಯವರು ಬಸವೇಶ್ವರ ಅಧ್ಯಯನ ಪೀಠವನ್ನು ಮಾದರಿ ಸಂಸ್ಥೆಯಾಗಿ ರೂಪಿಸಿದ ರೂವಾರಿಗಳು ಡಾ. ಕಲಬುರ್ಗಿಯವರು ಬಸವೇಶ್ವರ ಅಧ್ಯಯನ ಪೀಠದಲ್ಲಿ ಉಪನ್ಯಾಸ ಮಾಲೆಯನ್ನು ಪ್ರಾರಂಭಿಸಿ ಡಾ. ಸಿದ್ದಯ್ಯ ಪುರಾಣಿಕರು "ಅಕ್ಕಮಹಾದೇವಿ" ಕುರಿತು ವಿದ್ವತ್ ಪೂರ್ಣವಾಗಿ ಉಪನ್ಯಾಸ ನೀಡಿದ್ದನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿ ಡಾ. ಕಲಬುರ್ಗಿಯವರು ಬಸವೇಶ್ವರ ಅಧ್ಯಯನಪೀಠದಿಂದ ಆಕೃತಿಯನ್ನು ಬಿಡುಗಡೆಗೊಳಿಸಿದರು. ವಿದ್ಯಾರ್ಥಿಗಳು ಬಸವಣ್ಣನವರ ಸಾಮಾಜಿಕ, ಆಧ್ಯಾತ್ಮಿಕ ಹಾಗೂ ಸಾಹಿತ್ಯಿಕ ಚಿಂತನೆಗಳನ್ನು ಅಭ್ಯಾಸ ಮಾಡುವುದರ ಅಗತ್ಯವನ್ನು ಮನಗೊಂಡ ಡಾ. ಕಲಬುರ್ಗಿಯವರು' ಈಜಿಟ್ಟುಟಇಾಚ ಜ್ಞಿಆಚಂಿಚಡಚ ಖಿ್ಥಿಭಜಿಭಿಂ ಪ್ರಾರಂಭಿಸಿದರು. ಬಸವೇಶ್ವರ ಪೀಠವು "ಬಸವ ಮಾರ್ಕ್ಸ್", "ಬಸವ–ಗಾಂಧಿ" , "ಬಸವ ಅಂಬೇಡ್ಕರ" ಹೀಗೆ ಮೌಲ್ಯಕ ಗ್ರಂಥಗಳನ್ನು ಅವರು ಪ್ರಕಟಿಸಿದರು.

೧೯೮೩ ರಲ್ಲಿ ಡಾ. ಕಲಬುರ್ಗಿಯವರು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠ ವಿಭಾಗದ ಅಧ್ಯಕ್ಷರಾದರು. ಒಂದು ದೊಡ್ಡ ಸಂಸ್ಥೆಯನ್ನು ವ್ಯವಸ್ಥಿತವಾಗಿ ಜವಾಬ್ದಾರಿಯೊಂದಿಗೆ

ಡಾ. ಕಲಬುರ್ಗಿಯವರು ನಡೆಸಿದರು ತಮ್ಮ ಅವಧಿಯಲ್ಲಿ ಎರಡು ಜನಪದ ಸಮ್ಮೇಲನಗಳನ್ನು ಸಂಘಟಿಸಿ ಅವುಗಳ ವಿಷಯಗಳನ್ನು ಪುಸ್ತಕಗಳ ರೂಪದಲ್ಲಿ ಪ್ರಕಟಿಸಿದರು. ಕನ್ನಡ ವಿಭಾಗದ ಕನ್ನಡ ಅಧ್ಯಯನ ಪೀಠದ ರೂವಾರಿ ಹೊಸ ತಲೆಮಾರಿನ ಕನ್ನಡ ಅಧ್ಯಾಪಕರಿಗೆಲ್ಲ ಗುರುಗಳಾಗಿದ್ದ ಡಾ. ಆರ್.ಸಿ. ಹಿರೇಮಠ ಅವರ ಹೆಸರಿನಲ್ಲಿ ಒಂದು ವ್ಯಾಖ್ಯಾನ ಮಾಲೆಯನ್ನು ಡಾ. ಕಲಬುರ್ಗಿಯವರು ಪ್ರಾರಂಭಿಸುವದರೊಂದಿಗೆ ಡಾ. ಆರ್.ಸಿ. ಹಿರೇಮಠರ ಬಗ್ಗೆ ಅವರಲ್ಲಿದ ಅಭಿಮಾನ, ಗುರುಭಕ್ತಿಗೆ ನಿದರ್ಶವಾಗಿದೆ. ಸಂಶೋಧನೆ, ಸಂಪಾದನೆ, ಭಾಷಾ ವಿಜ್ಞಾನದ ಶಾಖೆಗಳು ಮೈತುಂಬಿಕೊಳ್ಳುವಂತೆ ಪ್ರಾಧ್ಯಾಪಕರನ್ನು ಪ್ರೋ ವಿದ್ಯಾರ್ಥಿಗಳನ್ನು ಪ್ರೋ ಡಾ. ಕಲಬುರ್ಗಿಯವರು ಅವರು ಬರೆದ ಕವಿತೆಗಳ ಸಂಕಲನ "ದಿಗಂಬರ" ವನ್ನು ಅವರು ಶ್ರಮವಹಿಸಿ ಪ್ರಕಟಿಸಿದರು. ಕವಿ ಸಮ್ಮೇಳನ ಸಾಹಿತ್ಯ ಸಮ್ಮೇಳನ, ಜನಪದ ಸಮ್ಮೇಳನಗಳನ್ನು ನಡೆಸುವಂತೆ ಕನ್ನಡ ಸಂಸ್ಕೃತಿ ಸಮ್ಮೇಲಗಳನ್ನು ರೂಪಿಸಿದವರು ಡಾ. ಎಂ. ಎಂ. ಕಲಬುರ್ಗಿಯವರು.

## ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿ –೧೯೯೮–೨೦೦೧ :

೧೯೯೮ ಇದು ಡಾ. ಎಂ.ಎಂ. ಕಲಬುರ್ಗಿಯವರ ನಿವೃತ್ತಿ ವರ್ಷ ಅದೇ ವರ್ಷ ಅವರು ಕನ್ನಡ ವಿಶ್ವವಿದ್ಯಾಲಯದ ಎರಡನೆಯ ಕುಲಪತಿಗಳಾದರು. ಡಾ. ಕಲಬುರ್ಗಿಯವರಿಗೆ ತಪ್ಪಿ ಹೋಗಬಹುದಾಗಿದ್ದ ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಸ್ಥಾನ ದೈವಯೋಗದಿಂದ ಒಲಿದು ಬಂದಿತು. ಕನ್ನಡ ವಿಶ್ವವಿದ್ಯಾಲಯದ ಸಾಂಸ್ಥಿತ ರಚನೆ , ಶೈಕ್ಷಣಿಕ ಕ್ರಿಯಾಶೀಲತೆ, ಸಂಶೋಧನಾ ಕಾರ್ಯಗಳು ವ್ಯವಸ್ಥಿತವಾಗಿ ನಡೆಯಬೇಕಾದ ಕಾರ್ಯವನ್ನು ಡಾ. ಕಲಬುರ್ಗಿಯವರು ಒಂದು ಸವಾಲಾಗಿಯೇ ಸ್ವೀಕರಿಸಿದರು. ವಿಶ್ವವಿದ್ಯಾಲಯದ ಎಲ್ಲ ವಿಭಾಗಗಳ ಪ್ರಾಧ್ಯಾಪಕರಿಗೆ ಅವರು ಸೂಕ್ತವೆನ್ನುವ ಕಾರ್ಯವನ್ನು ಗೊತ್ತುಪಡಿಸಿ, ಸಮಯಬದ್ಧವಾಗಿ ಕಾರ್ಯನಿರ್ವಹಿಸುವಂತೆ ನೋಡಿಕೊಂಡರು. ವಿಶೇಷೋಪನ್ಯಾಸ ಮಾಲೆ, ಪುಸ್ತಕ ಪ್ರಕಟಣೆ, ಎಲ್ಲದರ ಮೇಲೆ ಸಂಪೂರ್ಣ ಆಸಕ್ತಿ ವಹಿಸಿ ಕೆಲಸವನ್ನು ಮಾಡಿಸಿದರು. ಮಂಟಪ ಮಾಲೆಯಲ್ಲಿ ಹಲವಾರು ಕೃತಿಗಳು ಪ್ರಕಟಗೊಂಡವು. ಸ್ವತಃ ಕಲಬುರ್ಗಿಯವರು " ಹರಿಹರ ಸಮಗ್ರ ರಗಳೆ" ಗಳನ್ನು ಸಂಪಾದಿಸಿ ಪ್ರಕಟಿಸಿದರು.

ವಿಶ್ವವಿದ್ಯಾಲಯದ ವಿವಿಧ ವಿಭಾಗಗಳು ಸ್ವತಂತ್ರವಾಗಿ ಬೆಳೆಯಲು ಸ್ವತಂತ್ರ ಘಟಕಗಳನ್ನು ಪಾರರಂಭಿಸಿದರು. ಉತ್ತರ ಕರ್ನಾಟಕದ ಅಭಿವೃದ್ದಿ ಅಧ್ಯಯನ, ಕನ್ನಡ ಮಾಲೆ, ಉತ್ತ ಕರ್ನಾಟಕದ ಎಲ್ಲ ಜಿಲ್ಲೆ ಶಾಸನ ಸಂಪಾದನೆ, ಕರ್ನಾಟಕದ ಪ್ರತಿಯೊಂದು ಗ್ರಾಮದ ದೇವಾಲಯಗಳ ಪರಿವೀಕ್ಷಣೆ , ಹಸ್ತ ಪ್ರತಿ ಸಂಗ್ರಹಗಳಂಥ ಹೊಸ ಯೋಜನೆಗಳನ್ನು ರೂಪಿಸಿ ಅವುಗಳ ಮೂಲಕ ಪ್ರಾಧ್ಯಾಪಕರನ್ನು ಸಂಶೋಧನೆ ಮತ್ತು ಕ್ಷೇತ್ರ ಕಾರ್ಯಗಳಲ್ಲಿ ಸಕ್ರೀಯವಾಗಿ ದುಡಿಯುವಂತೆ ಪ್ರೇರಣೆ ಮತ್ತು ಸ್ಫೂರ್ತಿಯನ್ನು ನೀಡಿದರು. ಕನ್ನಡ ವಿಶ್ವವಿದ್ಯಾಲಯವನ್ನು ಆರ್ಥಿಕವಾಗಿ ಸುಭದ್ರಗೊಳಿಸುವುದಕ್ಕೆ

ಸರ್ಕಾರದ ಮುಖ್ಯಮಂತ್ರಿಗಳ ಮನ ಒಲಿಸಿ ವಾರ್ಷಿಕ ಅನುದಾನವನ್ನು ಬಿಡುಗಡೆ ಮಾಡಿಸಿಕೊಂಡು ಬಂದು ಕನ್ನಡ ವಿಶ್ವವಿದ್ಯಾಲಯಕ್ಕೆ ಹಿಂದೆ ಇದ್ದ ಆರ್ಥಿಕ ತೊಂದರೆಯನ್ನು ನಿವಾರಿಸಿ, ಹಂಪಿಯ ಕನ್ನಡ ವಿಶ್ವವಿದ್ಯಾಲಯವನ್ನು ರಾಜ್ಯದ ಮೂಲೆ ಮೂಲೆಗೆ ಕೊಂಡೊಯ್ಯುವ ಮೊದಲ ಹಂತದ ಪ್ರಯೋಗಗಳನ್ನು ಆರಂಭಿಸಿ " ಎಲ್ಲ ರಸ್ತೆಗಳು ರೋಮದ ಕಡೆಗೆ" ಎಂಬಂತೆ "ಕನ್ನಡದ ಎಲ್ಲ ಹಾದಿಗಳು ಹಂಪಿಯ ಕಡೆಗೆ" ಎಂಬ ವಾತಾವರಣವನ್ನು ಡಾ. ಕಲಬುರ್ಗಿಯವರು ತಮ್ಮ ಅಧಿಕಾರದ ಅವಧಿಯಲ್ಲಿ ರೂಪಿಸಿದರು. ಅವರು ತಮ್ಮ ಅಧಿಕಾರವಧಿಯ ಮೂರು ವರ್ಷಗಳಲ್ಲಿ ಆರ್ಥಿಕವಾಗಿ ಅತ್ಯಂತ ಸಮರ್ಥವಾಗಿ ಶೈಕ್ಷಣಿಕ ಆಡಳಿತವನ್ನು ನಿರ್ವಹಿಸಿ. "ಹಣವನ್ನು ನೀರಿನಂತೆ ಗಳಿಸು, ತೀರ್ಥದಂತೆ ಬಳಸು" ಎಂಬ ನೀತಿಯ ತತ್ವ ಆಧಾರದ ಮೇಲೆ ಪ್ರಾಮಾಣಿಕ ಹಾಗೂ ದಕ್ಷ ಕುಲಪತಿಗಳಾಗಿ ಕನ್ನಡ ವಿಶ್ವವಿದ್ಯಾಲಯವನ್ನು ಮುನ್ನಡೆಸಿದರು. ತಮ್ಮ ಕುಲಪತಿ ಅಧಿಕಾರವಧಿಯ ಕೊನೆಯ ದಿನದವರೆಗೂ ಕಾರ್ಯವನ್ನು ನಿರ್ವಹಿಸಿ, ಅವಧಿ ಮುಗಿದ ಕ್ಷಣದಲ್ಲಿಯೇ ಕಾಲುನಡಿಗೆಯಿಂದ ಬಸ್ಸನ್ನು ಹತ್ತಿ ತಮ್ಮ ನಿವಾಸಕ್ಕೆ ಬಂದುದು ಅವರ ಪ್ರಾಮಾಣಿಕತೆಗೆ ಸಾಕ್ಷಿ. ಅದಲ್ಲದೆ ಕುಲಪತಿಗಳಿಗೆ ಪ್ರತಿ ತಿಂಗಳು ವಿಶೇಷವಾಗಿ ನೀಡುವ ಸಂಭಾವನೆಯ ಹತ್ತು ಸಾವಿರ ರೂಪಾಯಿಗಳನ್ನು ವಿನಯೋಗಿಸಲಾರದೆ ಮೂರು ವರ್ಷದ ಹಣವನ್ನು ತಮ್ಮ ಧರ್ಮ ಪತ್ನಿಯವರ ಹೆಸರಿನಲ್ಲಿ ಶ್ರೀಮತಿ ಉಮಾದೇವಿ ಕಲಬುರ್ಗಿ ಮಹಿಳಾ ಕಲ್ಯಾಣ ನಿಧಿಯನ್ನು ಸ್ಥಾಪಿಸಿ ವಿಶ್ವವಿದ್ಯಾಲಯದ ಮಹಿಳಾ ಸಿಬ್ಬಂದಿಯವರಿಗೆ ಮೀಸಲಾಗಿರಿಸಿದ ಹಿರಿತನ ಡಾ. ಕಲಬುರ್ಗಿಯವರದು ಇದಲ್ಲದೆ ಪಂಪ ಪ್ರಶಸ್ತಿಯ ಒಂದು ಲಕ್ಷ ರೂಪಾಯಿಗಳನ್ನು "ಪಂಪ ಸ್ಮಾರಕ ಭವನಕ್ಕೆ ಉದಾರವಾಗಿ ನೀಡಿದರು ತಮ್ಮ ನಿವೃತ್ತಿಯ ನಂತರ ಬಂದ ಹೆಚ್ಚಿನ ಹಣವನ್ನು ಗದುಗಿನ ತೋಂಟದಾರ್ಯ ಮಠ ಬೆಳಗಾವಿ ನಾಗನೂರು ರುದ್ರಾಕ್ಷಿಮಠಗಳಿಗೆ ದಾಸೋಹಕ್ಕಾಗಿ ನೀಡಿದ್ದು ಇದಕ್ಕೆ ಉದಾಹರಣೆಗಳು ಅವರ ಔದಾರ್ಯಕ್ಕೆ ಎನಿಸಿದೆ.

ಡಾ. ಕಲಬುರ್ಗಿ ಅವರು ವಿಶ್ವವಿದ್ಯಾಲಯದ ಕುಲಪತಿಯ ಅಧಿಕಾರದಿಂದ ನಿವೃತ್ತಿಯಾದ ನಂತರ ಹಲವಾರು ಸಾಹಿತ್ಯಿಕ ಯೋಜನೆಗಳ ಅನುಷ್ಠಾನಗಳಲ್ಲಿ ವಿಚಾರ ಸಂಕಿರಣಗಳಲ್ಲಿ ಪುಸ್ತಕ ಪಟಕಣೆಗಳಂಥ ಕ್ರಿಯಾತ್ಮಕ ಚಟುವಟಿಕೆಗಳಲ್ಲಿ ಸದಾ ಕಾಲ ತೊಡಗಿಸಿಕೊಳ್ಳುತ್ತಿದ್ದರು. ಸದಾ ಕಾಲ ಕೆಲಸದಲ್ಲಿ ತೊಡಗಿರುತ್ತಿದ್ದುದರಿಂದ ಯಾವ ಕಾಯಿಲೆಯೂ ಅವರ ಬಳಿ ಸುಳಿಯುತ್ತಿರಲಿಲ್ಲ. ಹಿತ ಮಿತವಾದ ಆಹಾರ, ನಿರಂತರ ಓದು ಬರಹ ಇವುಗಳು ಅವರ ಆರೋಗ್ಯವನ್ನು ಸುರಕ್ಷಿತವಾಗಿಟ್ಟಿದ್ದವು. ಇತರರಂತೆ ಆರೋಗ್ಯ ರಕ್ಷಣೆಗಾಗಿ ಅವರು ಯೋಗ, ವಾಯು ವಿಹಾರದಂಥ ಚಟುವಟಿಕೆಗಳನ್ನು ರೂಢಿಸಿಕೊಂಡಿರಲಿಲ್ಲ ಅವರಿಗೆ ಓದು ಬರಹವೆ ಯೋಗ. ಚಿಂತನ ಮಂಥನವೇ ವಾಯುವಿಹಾರ, ಅವರೊಬ್ಬ ಅಧ್ಯಯನ ಯೋಗಿ, ಚಿಂತನ ವಿಹಾರಿ ಅದರಲ್ಲಿಯೇ ಅವರು ತಮ್ಮ ದೇಹ ಮನಸ್ಸಿನ ಸ್ವಾಸ್ಥ್ಯವನ್ನು ಕಾಪಾಡಿಕೊಂಡು ಬಂದಿದ್ದರು.

ಡಾ. ಕಲಬುರ್ಗಿಯವರು ತಮ್ಮ ಸಂಶೋಧನೆಯಲ್ಲಿ ಕಂಡು ಕೊಂಡ ಸತ್ಯ ಸಂಗತಿಗಳನ್ನು ಯಾವುದಕ್ಕೂ ಹೆದರದೆ ಸ್ಥಿತ ಪ್ರಜ್ಞತೆಯಿಂದ ಅಭಿವ್ಯಕ್ತಗೊಳಿಸುತ್ತಿದ್ದರು. ತಮ್ಮ ಸಂಶೋಧನೆ ಕ್ಷೇತ್ರದ ಮೂಲಕ ಅವರು ಅನೇಕ ಅಗ್ನಿದಿವ್ಯಗಳನ್ನು ದಾಟಿ ಬಂದವರು. ತಮ್ಮ ಬದುಕಿನಲ್ಲಿ "ಸಂಶೋಧಕನಿಗಿಂತ ಸತ್ಯ ದೊಡ್ಡದು" ಎಂದುಕೊಂಡವರು. ತಮ್ಮ ಸಂಶೋಧನೆಯ ವಿಚಾರಗಳಿಗೆ ಅನೇಕ ಸಂಕಷ್ಟಗಳು ಬಂದರೂ ಎಲ್ಲವನ್ನು ಧೈರ್ಯದಿಂದ ಎದುರಿಸಿ "ಕಾಲ ಕೆಳಗಿನ ಬೆಂಕಿಗಿಂತ ಕಣ್ಣ ಮುಂದಿನ ಬೆಳಕು ದೊಡ್ಡದು" ಎಂಬ ತತ್ವವನ್ನು ನಂಬಿ ಮುನ್ನಡೆದವರು . ತಮ್ಮ ಕಾಯಕ ಶ್ರದ್ಧೆ, ಸಂಕಲ್ಪ ಸಿದ್ಧಿಗಳನ್ನು ನಿರಂತರವಾಗಿ ಕಾಪಾಡಿಕೊಂಡು ಬಂದವರು. "ಎಲ್ಲರೂ ಅಹುದೆಂಬುದು ಪ್ರಮಾಣವಲ್ಲ, ಎಲ್ಲರೂ ಅಲ್ಲಾ ಎಂಬುದು ಪ್ರಮಾಣವಲ್ಲ" ಜನ ಮೆಚ್ಚಿನೆಡಕೊಂಡರೇನಂತೆ ಲೋಕದೊಳು ಮನ ಮೆಚ್ಚಿನೆಡೆಕೊಂಬುದೆ ಚಂದವು" ಎಂಬ ಆತ್ಮ ಬಲ ಸತ್ಯ ನಿಷ್ಠೆಗಳಿಂದ ಜೀವನ ನಡೆಸಿದವರು. ಅವರು ತಮ್ಮ " ಕನ್ನಡ ಸಂಶೋಧನಾಶಾಸ್ತ್ರ" ಗ್ರಂಥದಲ್ಲಿ "ಸಂಶೋಧಕ ಒಂದು ಪರಿಮಿತಿಯಲ್ಲಿ ಶಿಲುಬೆ ಶಿಕ್ಷೆ ವಿಷಪ್ರಾಶನದಂಥ ಕ್ರೂರ ವಿರೋಧಿಗಳಿಗೆ ಗುರಿಯಾಗಬೇಕಾಗುತ್ತದೆ". ಭಾರತದಂಥ ಜಾತಿವಾದಿ ರಾಷ್ಟ್ರಗಳಲ್ಲಿ ಜಾತಿ ಮತಗಳ ವಿಷಯವಾಗಿ ಮೂಡಿದ ಸಂಶೋಧನೆ ಅನೇಕ ಪ್ರತಿಭಟನೆಗಳಿಗೆ ಗುರಿಯಾಗುತ್ತದೆ ಎಂದು ಅವರು ಹೇಳಿದಂತೆ, ಕೆಲ ದುಷ್ಟ ಶಕ್ತಿಗಳು . ೨೦೧೫ ನೆಯ ಅಗಸ್ಟ ೩೦ ರವಿವಾರ ಮುಂಜಾನೆ ಎಂಟುವರೆ ಘಂಟೆಗೆ ವಿದ್ಯಾರ್ಥಿಗಳ ನೆಪದಲ್ಲಿ ಬಂದು ಹತ್ಯೆಗೈದರು. ಡಾ. ಎಂ.ಎಂ. ಕಲಬುರ್ಗಿಯವರು ಭೌತಿಕವಾಗಿ ನಮ್ಮಿಂದ ದೂರವಾಗಿದ್ದರೂ ತಮ್ಮ ಸಾವಿರಾರು ಸಾಹಿತ್ಯ ಲೇಖನಗಳ ಮೂಲಕ ಕೃತಿಗಳ ಮೂಲಕ ಸರ್ಯೂ ಚಂದ್ರರಿರುವ ತನಕ ಮೃತ್ಯುಂಜಯರಾಗಿದ್ದಾರೆ.

# ಅಧ್ಯಾಯ– ಮೂರು

## ವಚನ ಸಾಹಿತ್ಯ ಪ್ರಕಟಣೆಯ ಇತಿಹಾಸ

* ಪ್ರಾರಂಭದ ಪ್ರಯತ್ನಗಳು
* ಡಾ. ಫ.ಗು. ಹಳಕಟ್ಟಿಯವರು (ಶಿವಾನುಭವ ಗ್ರಂಥಮಾಲೆ) (ವಿಜಯಪುರ)
* ಡಾ. ಆರ್.ಸಿ. ಹಿರೇಮಠ ಸಂಪಾದನೆ
* ಜಗದ್ಗುರು ತೋಂಟದಾರ್ಯ ಮಠದ ಲಿಂಗಾಯತ ಅಧ್ಯಯನ ಸಂಸ್ಥೆ

## ಅಧ್ಯಾಯ : ಮೂರು

# ವಚನ ಸಾಹಿತ್ಯ ಪ್ರಕಟಣೆಯ ಇತಿಹಾಸ

### ಪ್ರಾರಂಭದ ಘಟ್ಟಗಳು

ಕ್ರಿಶ. ೧೮೧೭ ರಲ್ಲಿಯ ಕನ್ನಡ ಅಚ್ಚಿನ ಮೊಳೆಗಳು ಸಿದ್ದಗೊಂಡು ವ್ಯಾಕರಣ ಗ್ರಂಥವೊಂದು ಪ್ರಕಟಗೊಂಡಿದ್ದರೂ ಕ್ರಿಶ. ೧೮೪೮ ರವರೆಗೆ ಕನ್ನಡ ಪ್ರಾಚೀನ ಕೃತಿಗಳ ಮುದ್ರಣಕ್ಕೆ ಕಾಯಬೇಕಾಯಿತು. ಕನ್ನಡ ಪ್ರಾಚೀನ ಕೃತಿಗಳನ್ನು ಮುದ್ರಿಸಿದ ಶ್ರೇಯಸ್ಸು ಮಂಗಳೂರಿನಲ್ಲಿದ್ದ ಕ್ರಿಶ್ಚಿಯನ್ ಮೋಗ್ಲಿಂಗ್‌ನಿಗೆ ಸಲ್ಲುತ್ತದೆ. ಅವನು ತಾನೆ ಆರಂಭಿಸಿದ 'ಬಿಬ್ಲಿಯಾಥಿಕಾ ಕರ್ನಾಟಿಕಾ' ಮಾಲಿಕೆಯಲ್ಲಿ ಪ್ರಪ್ರಥಮವಾಗಿ ಲಕ್ಷ್ಮೀಶ ಕವಿಯ ಕನ್ನಡ ಜೈಮಿನಿ ಭಾರತವನ್ನು ಕನ್ನಡ ಲಿಪಿಯಲ್ಲಿ ಕ್ರಿಶ. ೧೮೪೮ ರಲ್ಲಿ ಮುದ್ರಿಸಿ ಪ್ರಕಟಿಸಿದ ಅದು ಕಲ್ಲಚ್ಚಿನ ಪ್ರತಿ ಪೂರ್ಣ ಗ್ರಂಥ ಪ್ರಕಟವಾದಂತೆ ತೋರುವುದಿಲ್ಲ ಅದರ ಸಂಪಾದಕ ರೆವರೆಂಡ್ ಜಾನ್ ಗ್ಯಾರೆಟ್ ಎಂದು ತಿಳಿಯುತ್ತದೆ.

ಪ್ರಾಚೀನ ವೀರಶೈವ ಕೃತಿಗಳನ್ನು ಮೊಟ್ಟ ಮೊದಲು ಅಚ್ಚಿಸಿದ ಕೀರ್ತಿ ಕೂಡ ಮೊಗ್ಲಿಂಗನದೆ. ಭೀಮ ಕವಿಯ 'ಬಸವ ಪುರಾಣ' ವಿರೂಪಾಕ್ಷ ಪಂಡಿತನ 'ಚನ್ನಬಸವ ಪುರಾಣ' ಇವು ಕ್ರಿ.ಶ. ೧೮೫೦ ರಲ್ಲಿ ಅವನ 'ಬಿಬ್ಲಿಯಾಧಿಕಾ ಕರ್ನಾಟಿಕಾ ಮಾಲಿಕೆಯಲ್ಲಿಯ ಪ್ರಕಟವಾಗಿದೆ. ಇಲ್ಲಿ ಗಮನೀಯವಾದ ಮತ್ತೊಂದು ಸಂಗತಿಯೆಂದರೆ ಇವೆರಡೂ ಪ್ರಮುಖ ವೀರಶೈವ ಕೃತಿಗಳ ಕಥಾಸಾರವನ್ನು ಕ್ರಿಶ. ೧೮೬೫ ಹಿಂದೆಯೇ ಡಬ್ಲ್ಯು . ಜಿ. ವರ್ತ ಎಂಬುವರು ಇಂಗ್ಲೀಷಿನಲ್ಲಿ ಬರೆದು ಅದನ್ನು ಮುಂಬೈ ರಾಯಲ್ ಏಶಿಯಾಟಿಕ್ ಸೊಸೈಟಿಯ ಪತ್ರಿಕೆಯಲ್ಲಿ ಪ್ರಕಟಿಸಿರುವರು.

ಹೀಗೆ ವೀರಶೈವ ಪ್ರಾಚೀನ ಕೃತಿಗಳ ಪ್ರಕಟನಾ ಕಾರ್ಯ ಕ್ರಿ.ಶ. ೧೮೫೦ರಿಂದ ಆರಂಭಗೊಂಡರೂ, ವೀರಶೈವ ಆತ್ಮದಂತಿರುವ ವಚನ ಗ್ರಂಥಗಳ ಪ್ರಕಟನೆ ಸುಮಾರು ಮೂವತ್ತು

ಮೂರು ವರ್ಷ ಮುಂದೆ ಹೋದುದು ಅಚ್ಚರಿಯ ಸಂಗತಿಯಾದರೂ ನಿಜ. ವಿಶ್ವ ಸಾಹಿತ್ಯಕ್ಕೆ ಕನ್ನಡದ ಅಮೂಲ್ಯ ಕೊಡುಗೆಯಾಗಿರುವ ವಚನ ಸಾಹಿತ್ಯ ಮೋಗ್ಲಿಂಗ್‌ನ ಕಣ್ಣಿಗೆ ಬೀಳಲಿಲ್ಲವೇ ? ತುಂಬಾ ಪವಿತ್ರವಾದವುಗಳೆಂಬ ಭಾವನೆಯನ್ನಿಟ್ಟುಕೊಂಡಿದ್ದ ನಮ್ಮವರ ವಚನಗಳ ಕಟ್ಟುಗಳನ್ನು ಪರಧರ್ಮೀಯರಿಗೆ ಕೊಡಲು ಮನಸ್ಸು ಮಾಡಲಿಲ್ಲವೇ ? ಇದನ್ನು ಒಪ್ಪಲು ಸಾಧ್ಯವಿಲ್ಲ ಏಕೆಂದರೆ, ಬಸವ ಪುರಾಣ ಚನ್ನಬಸವ ಪುರಾಣ ಗಳಂತಹ ಪೂಜ್ಯ ಗ್ರಂಥಗಳನ್ನು ಒದಗಿಸಿದ ನಮ್ಮವರು ವಚನಗಳ ಕಟ್ಟನ್ನು ಒದಗಿಸಿರಬಹುದು. ಕನ್ನಡಕ್ಕೆ ಅಪಾರ ಸೇವೆ ಸಲ್ಲಿಸಿದ ಎಫ್. ಕಿಟೆಲ್ ಅವರು ಅಖಂಡೇಶ್ವರ ವಚನಗಳನ್ನು ನೋಡಿದ್ದರ ಬಗ್ಗೆ ಅವರ ಒಂದೆರಡು ಲೇಖನಗಳೇ ಆಧಾರ ಒದಗಿಸುತ್ತವೆ. Old Kanarese, Literature. ಎಂಬ ಅವರ ಒಂದು ಪ್ರಬಂಧ ಕ್ರಿಶ. ೧೮೭೫ ರಷ್ಟು ಹಿಂದೆ Indian Antiquery ಯ ನಾಲ್ಕನೆಯ ಸಂಪುಟದಲ್ಲಿ ಪ್ರಕಟವಾಗಿದೆ. ಇದರಲ್ಲಿ ಹನ್ನೆರಡು ಜನ ವೀರಶೈವ ಕೃತಿಕಾರರ ಮತ್ತು ಕೃತಿಗಳ ಪರಿಚಯವನ್ನು ಕಿಟಲ್ ಮಾಡಿಕೊಟ್ಟಿದ್ದಾರೆ. ಅಲ್ಲಿ ಅಖಂಡೇಶ್ವರ ಹೆಸರಿದೆ. ಹಾಗೆಯೇ ನಾಗವರ್ಮನ ಕನ್ನಡ ಛಂದಸ್ಸು ಗ್ರಂಥಕ್ಕೆ ಕಿಟೆಲ್ ಬರೆದಿರುವ (ಕ್ರಿಶ. ೧೮೭೫) An Essay on canarese Literature ಹೆಸರಿನ ಮುನ್ನುಡಿ ರೂಪದ ಪ್ರಬಂಧದಲ್ಲಿ ಕೂಡ 'ಅಖಂಡೆಶ್ವರ' ಉಲ್ಲೇಖ ಬರುತ್ತದೆ. 'ಲಿಂಗಲೀಲಾ ವಿಲಾಸ ಚಾರಿತ್ರ' ದ ಕಲ್ಲಮಠದ ಪ್ರಭುದೇವನನ್ನು ಅವರು ಹೆಸರಿಸುತ್ತಾರೆ. ಇದರಿಂದ ಕಿಟೆಲ್ ಅವರಿಗೆ ವಚನಗಳ ಬಗ್ಗೆ ವಚನಕಾರರ ಹಾಗೂ ವಚನ ಸಂಕಲನಕಾರರ ಬಗ್ಗೆ ತಿಳಿದಿತ್ತೆಂಬುದು ಸ್ಪಷ್ಟ ಹೀಗಿದ್ದೂ ಇಂತಹ ಉತ್ತಮ ಸಾಹಿತ್ಯವನ್ನು ಪ್ರಕಟಿಸಲು ಏಕೆ ಮನಸ್ಸು ಮಾಡಲಿಲ್ಲ ? ಇದಕ್ಕೆ ಉತ್ತರ ಲಿಂ. ಪ.ಗು.ಹಳಕಟ್ಟಿಯವರಿಗೆ ಬಾಸೆಲ್ ಮಿಶನ್ ಪ್ರೆಸ್ಸಿನವರು ಬರೆದ ಒಂದು ಪತ್ರದಲ್ಲಿ ದೊರೆಯುತ್ತದೆ. ಫ.ಗು. ಹಳಕಟ್ಟಿಯವರು ಕ್ರಿಶ. ೧೯೧೮ರ ಹೊತ್ತಿಗೆ ತಾವು ಸಂಗ್ರಹಿಸಿದ ವಚನಶಾಸ್ತ್ರ ಸಾರ ಭಾಗ ವನ್ನು ಮುದ್ರಿಸುವಂತೆ ವಿನಂತಿಸಿ ಮಂಗಳೂರಿನ ಬಾಸೆಲ್ ಪ್ರೆಸ್ಸಿನವರಿಗೆ ಕಳುಹಿಸಿದರು. ಐದುನೂರು ರೂಪಾಯಿ ಮುಂಗಡ ಹಣವನ್ನು ಕೂಡ ಪಾವತಿ ಮಾಡಿದರು. ಆದರೆ ಕೆಲವೇ ದಿನಗಳಲ್ಲಿ ಹಸ್ತಪ್ರತಿ ಹಾಗೂ ದುಡ್ಡು ಫ.ಗು. ಹಳಕಟ್ಟಿಯವರಿಗೆ ಹಿಂದಿರುಗಿ ಬಂದವು ಜೊತೆಗೆ ' ನಿಮ್ಮ ಈ ಕೃತಿಯಲ್ಲಿ ನಮ್ಮ ಧರ್ಮದ ತತ್ವ ನೀತಿಗಳೇ ಪ್ರತಿಪಾದನೆಗೊಂಡಿರುವುದರಿಂದ ಇದರ ಪ್ರಕಟನೆ ನಮ್ಮ ಧರ್ಮದ ಪ್ರಚಾರಕ್ಕೆ ಬಾಧೆ ತರಬಹುದಾಗಿದೆ. " ಎಂಬರ್ಥ ಬರುವ ಪತ್ರವನ್ನು ಅವರು ಬರೆದಿದ್ದರಂತೆ ಇದರಿಂದ ಕ್ರೈಸ್ತ ಮಿಶನರಿಗಳ ಉದ್ದೇಶ ಪೂರ್ವಕ ವಚನ ಗ್ರಂಥಗಳನ್ನು ಪ್ರಕಟಿಸಲಿಲ್ಲವೆಂಬುದು ವಿದಿತವಾಗುತ್ತಿದೆ. ಉತ್ತಂಗಿ ಚನ್ನಪ್ಪನವರ ವರೆಗೆ ಯಾವ ಕ್ರೈಸ್ತ ಮತೀಯನೂ ವಚನ ಗ್ರಂಥಗಳನ್ನು ಪ್ರಕಟಿಸಿದಂತೆ ತೋರುವುದಿಲ್ಲ.

ವಚನ ಸಾಹಿತ್ಯ ಎಂದಾಕ್ಷಣ ಬಸವಣ್ಣವರ ವನಚಕೃತಿಯೇ ನೆನಪಾಗುತ್ತದೆ. ಅದು ಪ್ರಥಮಬಾರಿಗೆ ಮುದ್ರಣಗೊಂಡುದು ೧೮೮೯ ರಲ್ಲಿ ಆ ಪೂರ್ವದಲ್ಲಿ ಕೆಲವು ವಚನಕಾರರ ವಚನ ಗ್ರಂಥಗಳು ಹೀಗೆ ಪ್ರಕಟವಾಗಿವೆ.

೧. ಶಿಖಾರತ್ನ ಪ್ರಕಾಶ : ೧೮೮೩ :

' ಆ ಪ್ರಮಾಣ ಕೂಡಲ ಸಂಗಮದೇವ ಅಂಕಿತದ ಮೂವತ್ತೈದು ವಚನಗಳ ಸಂಕಲನವಿದು. ಈ ಅಂಕಿತ ಬಾಲಸಂಗಯ್ಯನದೆಂದು ನಂಬಲಾಗಿದೆ ಆದರೆ ಕೃತಿಯಲ್ಲಿ 'ಕೂಡಲ ಸಂಗಮವಧೂತ' ಎಂದಿದೆ.

೨. ಸಿದ್ದೇಶ್ವರ ವಚನವು –೧೮೮೫:

ತೋಂಟದ ಸಿದ್ದಲಿಂಗಯತಿಯ ೬೬೭ ವಚನಗಳನ್ನೊಳಗೊಂಡ ಈ ಕೃತಿಯ ಸಂಪಾದಕರು "ಶ್ರೀ ಮನ್ಮಹಂತಸ್ವಾಮಿಗಳವರ ಕರಕಂಜೋದ್ಭವರಾದ" ಶಾಂತ ಬಸವ ದೇವರೆಂದು ತೋರುತ್ತದೆ.

೩. ನಿಃಕಲರ ವಚನ –೧೮೮೫

ನಿಷ್ಕಲಂಕ ಚಿದಾನಂದಯೋಗಿಯ 'ನಿಃಕಲ' ಅಂಕಿತದ ೫೭೫ ವಚನಗಳ ಸಂಕಲನವಿದು.

೪. ಅಖಂಡೇಶ್ವರ ವಚನವು ಸಟಿಕ ೧೮೮೭

ಇದನ್ನು ಪ್ರಕಟಿಸಿದವರು ಗದುಗಿನ ಪಿ.ಸಿ. ಶಾಬಾದಿಮಠ ಬುಕ್ ಡಿಪೋದವರು.

ಬಸವಣ್ಣನವರ ವಚನಗಳು ಪ್ರಥಮ ಬಾರಿಗೆ ಮುದ್ರಣಗೊಳ್ಳುವ ಮೊದಲು ಪ್ರಕಟಗೊಂಡ ವಚನ ಸಂಕಲನಗಳಿವು ಕ್ರಿ.ಶ. ೧೮೮೭ ರ ಅನಂತರ ಕ್ರಿ.ಶ. ೧೯೨೩ ರ ವರೆಗೆ ಎಂದರೆ ಲಿಂ. ಫ.ಗು. ಹಳಕಟ್ಟಿಯವರ ವಚನಶಾಸ್ತ್ರ ಸಾರ ಭಾಗ –೧ ಪ್ರಕಟವಾಗುವವರೆಗೆ ಬಂದ ವಚನ ಸಂಕಲನಗಳು ಹೀಗಿವೆ.

೧) ೧. ಬಸವಣ್ಣನವರ ವಚನಗಳು ೧೮೮೯

ಮೊಟ್ಟ ಮೊದಲಿಗೆ ಮುದ್ರಣಗೊಂಡ ಬಸವಣ್ಣವರ ವಚನಗಳ ಗ್ರಂಥವಿದ್ದು. ಬ॥ ಮರಿಶಂಕರದ್ಯಾವರಿಂದ ಪರಿಶೋಧಿಸಿ ಪರಿಷ್ಕರಿಸಲ್ಪಟ್ಟ ಈ ಗ್ರಂಥದಲ್ಲಿ 'ಬಳ್ಳಾರಿ ಪುಸ್ತಕ ವ್ಯಾಪಾರಿಗಳಾದ ಮ.ರಾ.ಎಸ್. ಕೋನೇರಿ ಶೆಟ್ಟಿವರಿಂದ ಗ್ರಂಥ ರತ್ನಾಕರ ಮುದ್ರಾಕ್ಷರ ಶಾಲೆಯಲ್ಲಿ ಛಾಪಾ ಮಾಡಲ್ಪಟ್ಟಿತು. ಮದರಾಸ್ ೧೮೮೯ ಸಂ. " ಎಂದು ಕಾಣಿಸಲಾಗಿದೆ. ಇದರಲ್ಲಿ ೬೬೩ ವಚನಗಳಿದ್ದು ಅವನ್ನು ಷಟ್‌ಸ್ಥಲಾನು ಗುಣವಾಗಿ ಹೊಂದಿಸಲಾಗಿದೆ.

೨. ಬಸವಣ್ಣನವರ ವಚನ – ೧೯೨೩ : ಇದರಲ್ಲಿಯೂ ೬೬೩ ವಚನಗಳನ್ನು ಸೇರಿಸಲಾಗಿದೆ. ಷಟ್‌ಸ್ಥಲಾನುಗುಣವಾಗಿದೆ.

೨)ಅಂಬಿಗರ ಚೌಡಯ್ಯನ ವಚನ ಶಾಸ್ತ್ರವು – ೧೬೦೫ ದ್ವಿ.ಮಿ.

ಬಳ್ಳಾರಿಯ ಕರ್ನಾಟಕ ಬುಕ್ ಡಿಪೋದಿಂದ ಕ್ರಿ.ಶ. ೧೬೨೪ ರಲ್ಲಿ ಪ್ರಕಟವಾಗಿರುವ 'ಗಣೇಶೋಪಾಸಕ' ಸಂಪಾದಿತ ಅಂಬಿಗರ ಚೌಡಯ್ಯನ ವಚನಶಾಸ್ತ್ರವು ಗ್ರಂಥದಲ್ಲಿ ಅದರ ಎರಡನೆಯ ಮುದ್ರಣ ೧೬೦೫ ರಲ್ಲಿ ಬಂದಿದ್ದಂತೆ ಸೂಚಿಸಲಾಗಿದೆ.

ವಚನ ಸಾಹಿತ್ಯ ಪ್ರಕಟನೆಯ ಇತಿಹಾಸ

ಘನಲಿಂಗದೇವ ನಿರೂಪಿಸಿದ ಕನ್ನಡ ವೀರಶೈವ ಸಿದ್ಧಾಂತ ವಚನ –೧೯೦೭ ಘನಲಿಂಗದೇವನ ೬೩ ವಚನಗಳನ್ನೊಳಗೊಂಡಿರುವ ಈ ಕೃತಿಯ ಸಂಪಾದಕ ಎಂ. ಬಸವಲಿಂಗಶಾಸ್ತ್ರಿ ಇದು ಮೈಸೂರಿನಿಂದ ಪ್ರಕಟವಾಗಿದೆ.

ಮುಕ್ತ್ಯಂಗನಾ ಕಂಠಮಾಲೆ ಮತ್ತು ಜ್ಯೋತಿರ್ಮಯಿ ಶಾಂಭವಿ ೧೯೦೭

ಶ್ರೀ ಮದುಜ್ಜಯಿನೀ ನಿರಂಜನ ಸಂಸ್ಥಾನ ಬ್ರಹ್ಮ ಶ್ರೀ ತೋಂಟದಾರ್ಯ ಮಹಾಸ್ವಾಮಿಗಳವರ ಶಿಷ್ಯನಾದ ಚ.ತಾ. ದೊಡ್ಡೇರಿ ರಾಮಗಿರಿಮಠ ಆರ್ ತಿಪ್ಪಯ್ಯಶಾಸ್ತ್ರಿಯಿಂದ ಪರಿಷ್ಕರಿಸಲ್ಪಟ್ಟ ಈ ಕೃತಿ. ಮೈಸೂರಿನ ಶಂಕರ ವಿಲಾಸ ಮುದ್ರಾಕ್ಷರ ಶಾಲೆ ಮತ್ತು ಸ್ಟಾರ ಪ್ರೆಸ್ಸಿನಲ್ಲಿ ಮುದ್ರಣಗೊಂಡಿದೆ.

ಸಟೀಕಾ ಗಣಭಾಷ್ಯ ರತ್ನಮಾಲೆ –೧೯೦೯

ಗುಬ್ಬಿಯ ಮಲ್ಲಣಾರ್ಯ (ಕ್ರಿ.ಶ. ೧೫೧೩) ರಚಿತ ಈ ಗ್ರಂಥವನ್ನು ಬೆಂಗಳೂರು ಬಳ್ಳಾಪುರದ ಪೇಟೆಯಲ್ಲಿರುವ ವೇ। ನಂಜುಂಡಶಾಸ್ತ್ರಿಗಳವರ ಶಿವಪ್ಪ ಶಾಸ್ತ್ರಿಗಳು ಪರಿಷ್ಕರಿಸಿದ್ದಾರೆ.

ಚನ್ನಬಸವಣ್ಣನವರ ವಚನಗಳು ೧೯೦೪

ಕಮಡಳ್ಳಿ ಮಠದ ಲಿಂಗಯ್ಯ ಈರಯ್ಯ ಅವರಿಂದ ಈ ಗ್ರಂಥ ಸಂಪಾದನೆಗೊಂಡಿದ್ದು ಬಳ್ಳಾರಿಯ ಕರ್ನಾಟಕ ಬುಕ್ ಡಿಪೋದಿಂದ ಪ್ರಕಾಶಗೊಂಡಿದೆ.

ಹೀಗೆ ಹಳಕಟ್ಟಿಯವರು ವಚನಗಳ ಪ್ರಕಟನೆಗೆ ತೊಡಗುವ ಪೂರ್ವದಲ್ಲಿ ಕೆಲವರು ಸ್ವತಂತ್ರ ವಚನ ಗ್ರಂಥಗಳು ಹಾಗೂ ಸಂಕಲನಗಳು ಪ್ರಕಟಗೊಂಡಿದೆ. ಇದನ್ನು ಪರಿಶೀಲಿಸಿದಾಗ ಕೆಲವು ಅಂಶಗಳು ನಮ್ಮ ಗಮನಕ್ಕೆ ಬರುತ್ತವೆ. ಅವುಗಳಲ್ಲಿ ಮುಖ್ಯವಾದವುಗಳನ್ನು ಹೀಗೆ ಸಂಗ್ರಹಿಸಬಹುದು.

ಆಧುನಿಕ ಗ್ರಂಥ ಸಂಪಾದನೆಯ ಶಾಸ್ತ್ರ ಶುದ್ಧ ದೃಷ್ಟಿಯಿಂದ ಪರಾಮರ್ಶಿಸಿದಾಗ ಈ ಕೃತಿಗಳಲ್ಲಿ ಹಲವಾರು ಕೊರತೆಗಳಿರುವುದು ಸ್ಪಷ್ಟವಾಗುತ್ತದೆ. ಹಲವಾರು ವಚನ ಗ್ರಂಥಗಳಲ್ಲಿ ಸಂಪಾದಕರು ಇಲ್ಲವೆ ಪರಿಶೋಧಕರ ಹೆಸರುಗಳೇ ಉಲ್ಲೇಖಗೊಂಡಿಲ್ಲ. ಉಲ್ಲೇಖಗೊಂಡಿರುವ ಗ್ರಂಥಗಳಲ್ಲಿ ಕೂಡಾ

ಆಯಾ ಕೃತಿಗಳ ಸಂಪಾದಕರು ಅಥವಾ ಪರಿಶೋಧಕರು ತಾವು ಬಳಸಿದ ಹಸ್ತ ಪ್ರತಿಗಳ ಬಗ್ಗೆ ಏನನ್ನೂ ಹೇಳಿಲ್ಲ. ಸಾಂಪ್ರದಾಯವಾದ ಹಳೇ ಪುಸ್ತಕಗಳ ವಹಿಗಳ ಮೇರೆಗೆ ಬ॥ ಮರಿಶಂಕರದ್ಯಾವರಿಂದ ಪರಿಶೋಧಿಸಿ ಪರಿಷ್ಕರಿಸಲ್ಪಟ್ಟವೆ, ಚೆನ್ನಾಗಿ ಪರಿಶೋಧಿಸಿ ಮುದ್ರಣ ಮಾಡಿಸಿರುತ್ತೇನೆ. ಲೇಖಕ ಪ್ರಮಾದಾದಿ ದೋಷಗಳಿಲ್ಲದಂತೆ ತಿಳಿಗನ್ನಡ ಸಂಜ್ಞಾಚಿನ್ಹೆಗಳಿಂ ಪರಿಷ್ಕರಿಸಿ ಮುದ್ರಿಸಲ್ಪಟ್ಟಿತು, "ಗಣ ಭಾಷ್ಯ ಶ್ಲೋಕಗಳಲ್ಲಿ ೫ ಶ್ಲೋಕವಾದರೂ ಸರಿಯಾಗಿರದೆ ಅನನ್ವಯ ಅಪಾರ್ಥ ಅನಾರ್ಥದಿ ದೋಷಗಳುಂಟಾಗಿದ್ದ ಕಾರಣ ೧೦-೬ ಪ್ರತಿಗಳು ಹೀಗೆಯೇ ಇದ್ದುದಂ ನೋಡಿ ಬಹು ಕಷ್ಟ ಪಟ್ಟು ಸಾಧ್ಯವಾದ ಮಟ್ಟಿಗೆ ಎಲ್ಲವನ್ನು ತಿದ್ದಿ ತಿಳಿಗನ್ನಡ ಸಂಜ್ಞಾರೂಪದಿಂದೆಲ್ಲರೂ ತಿಳಿಯುವಂತೆ ಸಂಸ್ಕರಿಸಿರುವೆನು ಇದರ ಟೀಕೆಯು ಕೇಲವು ಕಡೆ ಪ್ರತಿಪದಾರ್ಥವುಳ್ಳದಾಗಿಯೂ ಕೆಲವು ಕಡೆ ತಾತ್ಪರ್ಯದಂತೆಯೂ ಕೆಲವು ಕಡೆ ಭಾವಾರ್ಥದಂತೆಯೂ ಇದ್ದುದರ ತಿಳಿದು ಇದು ಹೀಗಿರುವುದೇ ಸಮಂಜಸವೆನಿಸಿ ಅಷ್ಟರೊಳಗಿದ್ದ ದೋಷಗಳಂ ತಿದ್ದಿ ಗ್ರಂಥವೆಲ್ಲವನ್ನು ಮನಬಂದಂತೆ ತಿದ್ದಿರುವರೆಂದು ಯಥಾಸ್ಥಿತವಾಗಿ ಸಂಸ್ಕರಿದೆ. ಮುಂತಾಗಿ ಹೇಳಿರುವುದಾದರೂ ತಾವು ಉಪಯೋಗಿಸಿದ ಹಸ್ತ ಪ್ರತಿಗಳನ್ನು ಕುರಿತು ಅದು ತಾಡೋಲೆಯದಿರಲಿ ಕಾಗದದ್ದಿರಲಿ ವಿವರವನ್ನು ನೀಡಿಲ್ಲ ಆಧುನಿಕ ಗ್ರಂಥ ಸಂಪಾದನಾ ದೃಷ್ಟಿಯಿಂದ ಇದೊಂದು ಕೊರತೆಯನ್ನಬಹುದು.

ಪಾಠಾಂತರಗಳನ್ನು ಕೂಡ ಈ ಅವಧಿಯಲ್ಲಿ ಪ್ರಕಟವಾಗಿರುವ ಯಾವ ವಚನ ಗ್ರಂಥಗಳಲ್ಲಿಯೂ ಕೊಟ್ಟಿಲ್ಲ. ವಚನಗಳ ಅಕಾರಾದಿ, ಕಠಿಣ ಮತ್ತು ಪಾರಿಭಾಷಿಕ ಪದಕೋಶ ಇತ್ಯಾದಿಗಳಂತೂ ಇಲ್ಲವೇ ಇಲ್ಲ. ಇವೆಲ್ಲವನ್ನು ಸುಮಾರು ನೂರು ವರ್ಷಗಳ ಹಿಂದೆ ಪ್ರಕಟಗೊಂಡ ಈ ಕೃತಿಗಳಲ್ಲಿ ಅಪೇಕ್ಷಿಸಲೂ ಬಾರದು ಏಕೆಂದರೆ ಆಧುನಿಕ ಗ್ರಂಥ ಸಂಪಾದನಾ ಶಾಸ್ತ್ರವೆಂಬುದು ಅಂದು ಕಿಟೆಲ್‌ರಂಥ ಒಬ್ಬಿಬ್ಬರು ಆಂಗ್ಲ ವಿದ್ವಾಂಸರನ್ನು ಬಿಟ್ಟರೆ ನಮ್ಮವರಿಗೆ ತಿಳಿದಿರಲಿಲ್ಲ.ತಿಳಿದುಕೊಳ್ಳುವ ಆಸಕ್ತಿಯೂ ಅವರಿಗಿರಲಿಲ್ಲ ಆದುದರಿಂದ ಈ ಕೃತಿಗಳನ್ನು ಸಂಪಾದನೆಗಳನ್ನುವುದಕ್ಕಿಂತ ಪ್ರಕಟನೆಗಳೆನ್ನುವುದು ಹೆಚ್ಚು ಸೂಕ್ತ.

೨) ವಚನ ಪ್ರಕಟನೆಯ ಈ ಮೊದಲ ಘಟ್ಟದಲ್ಲಿ ಒಬ್ಬೊಬ್ಬ ಶರಣನ ವಚನಗಳು ಷಟ್‌ಸ್ಥಲಾನುಗುಣವಾಗಿಯೊ, ಹಾಗೆಯೊ ಗ್ರಂಥ ರೂಪದಲ್ಲಿ ಪ್ರಕಟಗೊಂಡಿರುವುದೇ ಹೆಚ್ಚು ಆದರೆ ಗಣ ಭಾಷ್ಯಾ ರತ್ನ ಮಾಲೆ, ಮುಕ್ತ್ಯಂಗನಾ ಕಂಠಮಾಲೆ ಮತ್ತು ಜ್ಯೋತಿರ್ಮಯಿ ಶಾಂಭವಿ ಇಂತಹ ಗ್ರಂಥಗಳೂ ಈ ಅವಧಿಯಲ್ಲಿ ಪ್ರಕಟಗೊಂಡಿರುವುದನ್ನು ಮರೆಯಲಾಗದು.

೩) ಈ ಘಟ್ಟದಲ್ಲಿ ವಚನ ಗ್ರಂಥಗಳು ಕೆಲಮಟ್ಟಿಗೆ ಪ್ರಕಟಗೊಂಡಿದ್ದರೂ ನೀತಿ, ತತ್ವ, ಆಧ್ಯಾತ್ಮಗಳಿಗೆ ಸಂಬಂಧಿಸಿದಂತೆ ಪ್ರಕಟಗೊಂಡ ಕೃತಿಗಳ ಸಂಖ್ಯೆಯೇ ಇವುಗಳಿಂದ ಅಧಿಕವೆನ್ನಬಹುದು ಇದು ಅಂದಿನ ಜನತೆಯ ಅಭಿರುಚಿಯ ದ್ಯೋತಕ.

೪) ಅಖಂಡೇಶ್ವರ ಮತ್ತು ಬಸವಣ್ಣನವರ ವಚನಗಳ ನಾಲ್ಕು ನಾಲ್ಕು ಆವೃತ್ತಿಗಳು ೮ ರ ಅವಧಿಯಲ್ಲಿ ಬಂದಿರುವುದನ್ನು ಗಮನಿಸಿದಾಗ ಅಂದಿನ ಜನ ಇತರ ವಚನಕಾರರ ವಚನಗಳಿಗಿಂತ ಇವರ ವಚನಗಳನ್ನೇ ಹೆಚ್ಚಾಗಿ ಬಯಸುತ್ತಿದ್ದುದು ಸ್ಪಷ್ಟವಾಗುತ್ತದೆ. ಅವು ಹೆಚ್ಚು ಸರಳ ಮತ್ತು ನೇರವಾಗಿದ್ದುದೆ ಇದಕ್ಕೆ ಕಾರಣವಾಗಿರಬೇಕು.

೫) ಅಲ್ಲಮ ಪ್ರಭು, ಅಕ್ಕಮಹಾದೇವಿ, ಸಿದ್ಧರಾಮರಂತಹ ಪ್ರಮುಖ ವಚನಕಾರರ ಕೆಲವು ವಚನಗಳು ಬೇರೆ ವಚನಕಾರರ ಸಂಕಲನಗಳಲ್ಲಿ ಸೇರಿಕೊಂಡಿವೆಯೇ ವಿನಾ ಅವರ ವಚನಗಳು ಸ್ವತಂತ್ರ ಗ್ರಂಥರೂಪದಲ್ಲಿ ಪ್ರಕಟಗೊಂಡಿಲ್ಲ ನಿಜಕ್ಕೂ ಇದು ಆಶ್ಚರ್ಯದ ಸಂಗತಿ.

೬) ವಚನ ಸಂಕಲನಗಳಿಗೆ ಅಂದಿನವರು ಅಂಬಿಗರ ಚೌಡಯ್ಯನ ವಚನಶಾಸ್ತ್ರವು "ಘನಲಿಂಗದೇವ ನಿರೂಪಿಸಿದ ಕನ್ನಡ ವೀರಶೈವ ಸಿದ್ಧಾಂತ ವಚನವು" "ಅಖಂಡೇಶ್ವರ ವಚನ ಶಾಸ್ತ್ರವು" ಎಂದು ಹೆಸರಿಟ್ಟಿರುವುದನ್ನು ಹಾಗೆಯೇ 'ಅನುಭವ ಸಿದ್ಧಾಂಥ ವೆನಿಸಿಕೊಂಡಿರುವ ಉತ್ತಮ ವೀರಶೈವ ಸಿದ್ಧಾಂತದಲ್ಲಿ ಷಟ್‌ಸ್ಥಲ ವಿವರಣವನ್ನು ಕುರಿತು ಬಸವಣ್ಣನವರ ವಚನಗಳು "ಶ್ರೀಮದಸಂಖ್ಯಾತ ಪುರಾತನ ಸಟೀಕಾ ಗಣಭಾಷ್ಯ ರತ್ನಮಾಲೆ ಎಂಬ ವೀರಶೈವ ತತ್ವ ಪ್ರತಿಪಾದಕ ಸಿದ್ಧಾಂತ ಗ್ರಂಥಗಳೆಂದೇ ಭಾವಿಸಿದ್ದುದು ಮನವರಿಕೆಯಾಗುತ್ತದೆ. ಅವುಗಳ ಸಾಹಿತ್ಯಿಕ ಮಾಹಿತಿಯನ್ನು ಅವರು ಗುರುತಿಸಲು ಪ್ರಯತ್ನಿಸಿಲ್ಲವೆಂದೇ ಹೇಳಬಹುದು.

೭) "ವೇದಾಗಮಶಾಸ್ತ್ರ ಪುರಾಣೇತಿಹಾಸಾದಿ ನಾನಾ ಧರ್ಮ ಶಾಸ್ತ್ರೋಕ್ತಗಳಿಂದ ಪುರಾತನ ವಚನಗಳಿಂ ಸಪ್ರಮಾಣದೊಡನೆ ರಚಿಸಲ್ಪಟ್ಟ ಸಟೀಕಾ ಗಣಭಾಷ್ಯ ರತ್ನ ಮಾಲೆ" "ಎಲ್ಲಾ ನಿಗಮಂಗಳು ಎಲ್ಲಾ ಆಗಮಂಗಳು ಎಲ್ಲಾ ಶಿವಪುರಾಣಂಗಳು ಎಲ್ಲಾ ಸ್ಮೃತಿಗಳು ಎಲ್ಲಾ ಶಾಸ್ತ್ರಂಗಳು ಸಾರಸಾರವಾಗಿ ಅತಿಸಾರವೆನಿಸಿದ ಉಪನಿಷತ್ತುಗಳ ರಹಸ್ಯ ವೀರಮಾಹೇಶ್ವರರ ಗುಟ್ಟು ಎನಿಸಿಕೊಂಡಿರುವ ....ಬಸವಣ್ಣನವರ ವಚನಗಳು " ಮುಂತಾಗಿ ಒಳ ಮುಖ ಪುಟದಲ್ಲಿ ಉಲ್ಲೇಖಿಸಿರುವುದು ವಿಚಾರಣೀಯವಾಗಿದೆ. ವೀರಶೈವಕ್ಕೆ ವೇದಾಗಮ ಉಪನಿಷತ್ತುಗಳ ಸಂಬಂಧವಿರುವುದನ್ನು ಅಂದಿನವರು ಗಟ್ಟಿಯಾಗಿ ನಂಬಿದುದಕ್ಕೆ ಇಂತಹ ಮಾತುಗಳು ಸಾಕ್ಷಿ ಒದಗಿಸುತ್ತದೆ.

೮) ಮರಿಶಂಕರದ್ಯಾವರು ಪರಿಶೋಧಿಸಿ ಪರಿಷ್ಕರಿಸಿದ ಬಸವಣ್ಣನವರ ವಚನಗಳು ಗ್ರಂಥದ ಒಳ ಮುಖಪುಟದ ಆರಂಭದಲ್ಲಿ " ಶ್ರೀ ಬಸವಭಕ್ತಿ ರಸ್ತು, ಶಿವನಂದಿ, ಪ್ರಮಥ ಗಣ, ರೇವಣಾಚಾರ್ಯಾಧಿಬೋ ನಮಃ ಎಂದು ಬಂದಿದೆ. ಇಂದಿನ ವೀರಶೈವರು ಮುಖ್ಯವಾ ಮಠಾಧಿಪತಿಗಳು ಇದನ್ನು ಅವಶ್ಯ ಗಮನಿಸಬೇಕೆನಿಸುತ್ತದೆ. ಗುರುವರ್ಗ ಮತ್ತು ವಿರಕ್ತ ವರ್ಗದಲ್ಲಿ ಸೌಹಾರ್ದ ಮನೋಭಾವನೆ ಆತ್ಮೀಯತೆ ಹಾಗೂ ಪರಸ್ಪರರನ್ನು ಮನ್ನಿಸಿ ಗೌರವಿಸುವ ಗುಣ ಅಂದು ಇದ್ದುದನ್ನು ಇದು ಸೂಚಿಸುತ್ತದೆ. ಇಂದಿನ ನಮ್ಮೆಲ್ಲರಿಗೂ ಇಂತಹ ಮನೋಗುಣ ಅನುಕರಣೀಯ.

೯) ಈ ಘಟ್ಟದಲ್ಲಿ ಪ್ರಕಟಗೊಂಡಿರುವ ವಚನ ಗ್ರಂಥಗಳ ಸಂಪಾದಕರು, ಅಥವಾ ಪರಿಶೋಧಕರು, ಹೆಚ್ಚಾಗಿ ಜಂಗಮರು, ಶಾಸ್ತ್ರಿಗಳು ಸ್ವಾಮಿಗಳು ಅವುಗಳನ್ನು ಪ್ರಕಟಪಡಿಸಿದವರು ವೈಶ್ಯ ಶೆಟ್ಟರು ಅವರಲ್ಲಿಯೂ ಬಳ್ಳಾರಿಯ ವೈಶ್ಯ ಶೆಟ್ಟರೆ ಅಧಿಕ ಹದಿನೈದು ಹದಿನಾರನೆಯ ಶತಮಾನದಲ್ಲಿ ಹಂಪೆಯಲ್ಲಿ ನಡೆದ ಅಭೂತ ಪೂರ್ವ ವಚನ ಸಂಕಲನ ಕಾರ್ಯದ ಪ್ರಭಾವ ಹಾಗೂ ಸಂಸ್ಕಾರಗಳು ಜನಮನದಿಂದ ಸಂಪೂರ್ಣ ಅಳಿಸಿ ಹೋಗದಿದ್ದುದೆ ಇದಕ್ಕೆ ಕಾರಣವಾಗಿರಬೇಕು.

೧೦) ವೈಯಕ್ತಿಕ ಪ್ರಯತ್ನಗಳಿಂದಾಗಿಯೇ ಈ ಅವಧಿಯಲ್ಲಿ ವಚನ ಗ್ರಂಥ ಹೆಚ್ಚಾಗಿ ಪ್ರಕಟವಾಗಿದೆ. ಈಗಿನ ವೀರಶೈವ ಮಠಗಳು, ಸಂಘ ಸಂಸ್ಥೆಗಳು ವಚನ ಪ್ರಕಟನೆಗೆ ಹೆಚ್ಚಿನ ಗಮನ ಹರಿಸಿದಂತೆ ಆಗ ಹರಿಸಿದ ಬಗ್ಗೆ ತಿಳಿದು ಬರುವುದಿಲ್ಲ ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠವಂತೂ ಈ ನಿಟ್ಟಿನಲ್ಲಿ ಒಂದುಘಟ್ಟವನ್ನೇ ನಿರ್ಮಿಸಿದೆ ಅದರ ಈ ಕಾರ್ಯ ಚಿರಸ್ಥಾಯಿ.

ಡಾ. ಫ.ಗು. ಹಳಕಟ್ಟಿಯವರ ಶಿವಾನುಭವ ಗ್ರಂಥಮಾಲೆಯ

ಹದಿನೈದು ಹದಿನಾರನೆಯ ಶತಮಾನದಲ್ಲಿ ನೂರೊಂದು ಹಾಗೂ ಏಳು ನೂರೊಂದು ವಿರಕ್ತರ ಮೂಲಕ ವಚನ ಸಾಹಿತ್ಯದ ಸಂಗ್ರಹ ಸಂಕಲನ ಸಂಪಾದನೆ ವ್ಯಾಖ್ಯಾನ ಕಾರ್ಯಗಳು ನಡೆದರೆ ಹತ್ತೊಂಬತ್ತು ಇಪ್ಪತ್ತನೆಯ ಶತಮಾನದಲ್ಲಿ ಆಧುನಿಕ ವಿದ್ವಾಂಸರಿಂದ ವಚನ ಸಾಹಿತ್ಯದ ಪ್ರಕಟನ ಕಾರ್ಯ ಪ್ರಾರಂಭವಾಯಿತು. ಅಂದರೆ ಹಸ್ತಪ್ರತಿ ನಿರ್ಮಾಣ ಕಾರ್ಯ ನಿಂತು, ಯಂತ್ರ ಪ್ರತಿ ನಿರ್ಮಾಣ ಕಾರ್ಯ ಆರಂಭವಾಯಿತು ಹತ್ತೊಂಬತ್ತನೆಯ ಶತಮಾನದ ಕೊನೆಯ ಪಾದದಲ್ಲಿ ವಚನ ಪ್ರಕಟನಕಾರ್ಯ ಅನಾವರಣಗೊಂಡಿದ್ದು ಅದು ಅರುಣೋದಯ ಕಾಲ, ಇಪ್ಪತ್ತನೆಯ ಶತಮಾನ ಅದರ ಸೂರ್ಯೋದಯ ಕಾಲ , ವಚನ ಸಾಹಿತ್ಯದ ಪ್ರಕಟನ ಕಾರ್ಯ ಗಟ್ಟಿಯಾಗಿ, ವ್ಯವಸ್ಥಿತವಾಗಿ ವ್ಯಾಪಕವಾಗಿ ನಡೆದುದು ಈ ಸಮಯದಲ್ಲಿಯೇ

ವಚನ ಸಾಹಿತ್ಯ ಪ್ರಕಟನೆಯ ಇತಿಹಾಸದ ದ್ವಿತೀಯ ಮತ್ತು ಅದ್ವಿತೀಯ ಘಟ್ಟ ಆರಂಭವಾಗುವುದು ಫ.ಗು. ಹಳಕಟ್ಟಿಯವರಿಂದ ಫ.ಗು. ಹಳಕಟ್ಟಿ ಮತ್ತು ವಚನ ಸಾಹಿತ್ಯ ಪ್ರಕಟನೆಗಳಲ್ಲಿ ಲಿಂಗಾಂಗ ಸಾಮರಸ್ಯದಂಥ ಅನ್ಯೋನ್ಯ ಸಂಬಂಧವಿದೆ. ಫ.ಗು. ಹಳಕಟ್ಟಿಯವರು ವಚನ ಸಾಹಿತ್ಯ ಪ್ರಕಟನೆಗಾಗಿ ತಮ್ಮ ಇಡೀ ಜೀವಮಾನವನ್ನೇ ಮುಡಿಪಾಗಿಟ್ಟು ವಚನ ಪಿತಾಮಹರೆನಿಸಿಕೊಂಡರು ಈ ಸಾಹಿತ್ಯ ಪ್ರಕಟನೆಯ ಮೂಲಕ ಹಳಕಟ್ಟಿಯವರು ವೀರಶೈವ ಧರ್ಮ ಸಾಹಿತ್ಯ ಸಂಸ್ಕೃತಿಗಳ ಸಂರಕ್ಷಣ ಮತ್ತು ಸಂವರ್ಧನಕಾರ್ಯ ಮಾಡಿದರು.

ಹಳಕಟ್ಟಿಯವರು ತಮಗಿಂತ ಹಿಂದಿನ ವಚನ ಸಾಹಿತ್ಯ ಸಂಶೋಧನೆ ಪ್ರಕಟನೆಗಳಿಂದ ಪ್ರೇರೇಪಿತರಾಗದೆ ಸ್ವಯಂ ಪ್ರೇರಣೆಯಿಂದ ಈ ಸಾಹಿತ್ಯ ಸಂಶೋಧನ. ಪ್ರಕಟನ ಪ್ರಸಾರ ಕಾರ್ಯಗಳನ್ನು ಮಾಡಿದರು. ವಿದ್ಯಾರ್ಥಿ ದಿಸೆಯಲ್ಲಿದ್ದಾಗಿನಿಂದಲೇ ಕನ್ನಡ, ಭಾಷೆ, ಧರ್ಮ, ತತ್ವಜ್ಞಾನಗಳ ಬಗೆಗೆ

ಅಪಾರ ಆಸಕ್ತಿ ಹೊಂದಿದ್ದರು. ಸಹಪಾಠಿ ಹಾಲಬಾವಿ ವೀರಭದ್ರಪ್ಪನವರು ಜಮಖಂಡಿ ಸಂಸ್ಥಾನದ ಗೋಠೆ ಗ್ರಾಮದಲ್ಲಿ ತಮ್ಮ ಸಂಬಂಧಿಕರ ಮನೆಯಲ್ಲಿದ್ದ ಪ್ರಭುಲಿಂಗಲೀಲೆ, ಗಣಭಾಷಿತ ರತ್ನಮಾಲೆ ಹಸ್ತಪ್ರತಿಗಳನ್ನು ೧೯೦೧ ರಲ್ಲಿ ಹಳಕಟ್ಟಿಯವರಿಗೆ ಬನಹಟ್ಟಿಯಲ್ಲಿ ತೋರಿಸಿದರು. ಹಳಕಟ್ಟಿಯವರು ಹಸ್ತಪ್ರತಿಗಳನ್ನು ನೋಡಿದ್ದು ಇದೇ ಪ್ರಥಮ ಸಲ ಹಸ್ತಪ್ರತಿಗಳಿಂದ ಆಕರ್ಷಿತರಾದ ಹಳಕಟ್ಟಿಯವರು ೧೯೦೨ ರಲ್ಲಿ ಬನಹಟ್ಟಿಯ ಶಿವಲಿಂಗಪ್ಪ ಗಲಗಲಿಯವರ ಮನೆಯಲ್ಲಿ ೧೬, ಗುರುಬಸವಯ್ಯ ಕಂತಿಯವರ ಮನೆಯಲ್ಲಿ ೧೨ ಹಸ್ತ ಪ್ರತಿಗಳನ್ನು , ಬೆಳಗಾವಿಯ ಗುರು ಸಿದ್ದಪ್ಪ ಗಿಲಗಂಚಿಯವರ ಮನೆಯಲ್ಲಿ -೧೬, ಭೋಜಪ್ಪ ಬೋಜರವರ ಮನೆಯಲ್ಲಿ -೧೦ ಹಸ್ತಪ್ರತಿಗಳನ್ನು ಗಮನಿಸಿದರು. ೧೯೦೩ ರಲ್ಲಿ ಧಾರವಾಡದ ಶಿವಲಿಂಗಪ್ಪ ಮಂಚಾಲಿಯವರ ಮನೆಯಲ್ಲಿ ಹಸ್ತಪ್ರತಿಗಳ ದೊಡ್ಡ ರಾಶಿಯನ್ನೇ ಕಂಡರು. ಈ ಮೊದಲು ಕಾಗದಪ್ರತಿ ನೋಡಿದ್ದ ಹಳಕಟ್ಟಿಯವರು ತಾಳೆಗು ಪ್ರತಿಯನ್ನು ಮೊದಲು ನೋಡಿದ್ದು ಮಂಚಾಲಿಯವರ ಮನೆಯಲ್ಲಿಯೇ ಎಂಬುದನ್ನು ಗಮನಿಸಬೇಕು. ಇಲ್ಲಿಂದ ಮುಂದೆ ಹಸ್ತಪ್ರತಿಗಳ ಶೋಧ ಮತ್ತು ಸಂಗ್ರಹಕಾರ್ಯಗಳನ್ನು ಹಳಕಟ್ಟಿಯವರು ಕೈಗೆತ್ತಿಕೊಂಡರು.

ವಕೀಲಿ ವೃತ್ತಿಗಾಗಿ ಬೇರೆ ಬೇರೆ ಊರುಗಳಿಗೆ ಹೋದಾಗ ಅಲ್ಲಿ ಹಸ್ತ ಪ್ರತಿ ಸಂಗ್ರಹಕಾರ್ಯ ಕೈಕೊಂಡರು. ಮನೆಗಳ ದೇವರ ಜಗುಲಿಯ ಮೇಲೆ ದೈವಿ ಭಾವನೆಯಿಂದ ಪೂಜೆಗೊಳ್ಳುತ್ತಲಿದ್ದ ವೀರಶೈವ ಮಠಗಳ ಕೊಠಡಿಯಲ್ಲಿ ಬೀಗ ಮುದ್ರೆಯಿಂದ ಭದ್ರವಾಗಿದ್ದ ಹುಳುಗಳ ಬಾಯಿಗೆ ಆಹಾರವಾಗುತ್ತಿದ್ದ ಜನರ ಅಜ್ಞಾನ ಮೂಢನಂಬಿಕೆಗಳಿಂದ ನೀರು, ಅಗ್ನಿಗಳಿಗೆ ಆಹುತಿಯಾಗುತ್ತಲಿದ್ದ ಹಸ್ತ ಪ್ರತಿಗಳನ್ನು ಸಂಗ್ರಹಿಸಲು ಹಳಕಟ್ಟಿಯವರು ಪಟ್ಟ ಪಾಡು, ವಹಿಸಿದ ಪರಿಶ್ರಮ ಹೊಂದಿದ ಆಸಕ್ತಿ, ಮೂಡಿದ ಪ್ರಯತ್ನ ಅನನ್ಯವಾದುವು. 'ನಿಧಾನದ ಕಾಯ್ದಿರ್ದ ಚಿಂತರನಂತೆ' ಹಸ್ತಪ್ರತಿಗಳನ್ನು ಕಾಯ್ದುಕೊಂಡಿದ್ದ ಒಡೆಯರು ತಮ್ಮ ಬಳಿಯಲ್ಲಿರುವ ಹಸ್ತ ಪ್ರತಿಗಳನ್ನು ಕಡವಾಗಿ, ಮುಕ್ತವಾಗಿ ಕೊಡಲು ನಿರಾಕರಿಸಿದಾಗ ಹಣ ಕೊಟ್ಟು ಪಡೆದಿದ್ದಾರೆ. ಅನೇಕ ಸಲ ಬರಿಗೈಯಿಂದಲೂ ಬಂದಿದ್ದಾರೆ. ಹೀಗೆ ಹಳಕಟ್ಟಿಯವರು ಹಸ್ತಪ್ರತಿ ಶೋಧ ಮತ್ತು ಸಂಗ್ರಹಗಳಿಗಾಗಿ ಹಗಲು ರಾತ್ರಿಯೆನ್ನದೆ ಮಳೆ ಗಾಳಿಯೆನ್ನದೆ ಕಲ್ಲು ಮುಳ್ಳು ಗಳೆನ್ನದೆ ಫಕೀರರಾಗಿ ಅಲೆದಾಡಿದರು. ಹಳಕಟ್ಟಿಯವರ ಪವಿತ್ರ ಸಂಕಲ್ಪ ಕಾರ್ಯ ನಿಷ್ಠೆ , ಕ್ರಿಯಾಶೀಲ ವ್ಯಕ್ತಿತ್ವ ಹಾಗೂ ಪ್ರಾಮಾಣಿಕ ಪ್ರಯತ್ನಗಳಿಂದ ೧೯೨೦ರ ವರೆಗೆ ಒಂದು ಸಾವಿರಕ್ಕಿಂತಲೂ ಅಧಿಕ ಸಂಖ್ಯೆಯ ಹಸ್ತ ಪ್ರತಿಗಳು ಸಂಗ್ರಹವಾದವು. ಈ ಹಸ್ತಪ್ರತಿಗಳನ್ನು ಹಳಕಟ್ಟಿಯವರು ವಿಶೇಷವಾಗಿ ವಿಜಾಪುರ, ಬೆಳಗಾವಿ ಪ್ರದೇಶಗಳಿಂದ ಮಾತ್ರ ಸಂಗ್ರಹಿಸಿದ್ದಾರೆ. ಇದು ಅವರು ಪೂರೈಸಿದ ಗ್ರಂಥ ಪ್ರಕಟನಾಕಾರ್ಯದ ಪ್ರಥಮ ಹಂತವಾಗಿದೆ.

ಸಂಗ್ರಹಿಸಿದ ಹಸ್ತಪ್ರತಿಗಳಲ್ಲಿಯ ಮಹತ್ವದ ವಚನಗಳನ್ನು ಆರಂಭದಲ್ಲಿ ತಾವೇ ಪ್ರತಿ ಮಾಡಿದರು. ಆ ಮೇಲೆ ಎಲ್ಲ ವಚನಗಳನ್ನು ಹೀಗೆ ಪ್ರತಿ ಮಾಡುವುದು ತಮಗೆ ಅಸಾಧ್ಯ ಹಾಗೂ ಅಪಾರ ಸಮಯದ್ದೆನಿಸಿತು. ಆದ್ದರಿಂದ ಇಬ್ಬರು ಕಾರಕೂನರನ್ನು ನಿಯಮಿಸಿಕೊಂಡರು ಆ

ಕೆಲಸವನ್ನು ಮಾಡಿದರು. ಹೀಗೆ ೧೯೦೧ ರಿಂದ ೧೯೨೦ ರವರೆಗೆ ಹಸ್ತಪ್ರತಿ ಶೋಧ, ಸಂಗ್ರಹ, ವಾಚನ, ಪ್ರತಿಕರಣ, ವರ್ಗೀಕರಣ ವಿಷಯ ವಿಂಗಡನೆ, ಸ್ಥಲವಿಭಜನೆ, ಸಂಯೋಜನೆ ಇತ್ಯಾದಿ ಕಾರ್ಯಗಳನ್ನು ನೆರವೇರಿಸಿದರು. ವಚನ ಸಾಹಿತ್ಯ ಪ್ರಕಟನೆಯ ದೃಷ್ಟಿಯಿಂದ ಇದು ಅತ್ಯಂತ ಮಹತ್ವದ ಘಟ್ಟ. ಇದನ್ನು ವಚನ ಪರಿಷ್ಕರಣ ಕಾರ್ಯದ ಎರಡನೆಯ ಹಂತವೆಂದು ಕರೆಯಬಹುದು. ಹಳಕಟ್ಟಿಯವರ ಇಪ್ಪತ್ತು ವರ್ಷಗಳ ಸುದೀರ್ಘ ಪರಿಶ್ರಮ , ವಚನಗಳ ತಲಸ್ಪರ್ಶ ಅಧ್ಯಯನ , ಹಸ್ತಪ್ರತಿಗಳ ಒಡನಾಟ ಇತ್ಯಾದಿ ಅನುಭವಗಳ ಅಮೃತಫಲ, ೧೯೨೩ ರಲ್ಲಿ ಹೊರಬಂದ 'ವಚನ ಶಾಸ್ತ್ರ ಸಾರ ಭಾಗ ೧.

ವಚನಶಾಸ್ತ್ರಸಾರ ಭಾಗ-೧ರ ಮೂಲ ಪ್ರತಿಯನ್ನು ಐದುನೂರ ರೂಪಾಯಿಗಳ ಮುಂಗಡ ಹಣದೊಂದಿಗೆ ಮುದ್ರಣ ಮಾಡುವುದಕ್ಕಾಗಿ ಮಂಗಳೂರಿನ ಬಾಸೆಲ್ ಮಿಶನ್ ಪ್ರೆಸ್‌ದವರಿಗೆ ಕಳಿಸಿದರು. ಆದರೆ ಅವರಿಂದ "ನಿಮ್ಮ ಗ್ರಂಥದ ಧಾರ್ಮಿಕ ವಿಚಾರವನ್ನು ನಾವು ಮುದ್ರಿಸಲು ಇಷ್ಟಪಡುವುದಿಲ್ಲ. ನಿಮ್ಮ ಧರ್ಮದ ತತ್ವಗಳಿಗೂ ನಮ್ಮ ಧಾರ್ಮಿಕ ಗ್ರಂಥಗಳಿಗೂ ಹೋಲಿಕೆ ಇರುವುದರಿಂದ ನಮ್ಮ ಮಿಶನರಿ ಉದ್ದೇಶಕ್ಕೆ ಭಂಗಬರುತ್ತದೆ. ಆದ್ದರಿಂದ ಕ್ಷಮಿಸಿರಿ ಮುಂಗಡವಾಗಿ ಕಳುಹಿಸಿದ ಹಣ ಮರಳಿ ಕಳಿಸಿದ್ದೇವೆ. ಎಂಬ ನಕಾರಾತ್ಮಕ ಉತ್ತರ ಬಂದಿತು. ಇದರಿಂದ ಧೃತಿಗೆಡದ ಹಳಕಟ್ಟಿಯವರು ಉತ್ಸಾಹಿತರಾಗಿ ಬೆಳಗಾವಿಯ ಚೌಗಲೆಯವರ ಮಹಾವೀರ ಮುದ್ರಣಾಲಯದಲ್ಲಿ ವಚನಶಾಸ್ತ್ರಸಾರವನ್ನು ಮುದ್ರಿಸಿದರು. ವಚನಸಾಹಿತ್ಯ ಪ್ರಕಟನೆಯ ಬಗೆಗೆ ವಿದೇಶಿ ವಿದ್ವಾಂಸರು ತೋರಿದ ಉಪೇಕ್ಷೆಯನ್ನು ಗಂಭೀರವಾಗಿ ಪರಿಗಣಿಸಿದ ಹಳಕಟ್ಟಿಯವರು ಅದರ ಪ್ರಕಟನೆಯನ್ನು ಒಂದು ವ್ರತವಾಗಿ ಸ್ವೀಕರಿಸಿದರು. ಜೀವನದ ಒಂದು ಮಹತ್ವದ ಕರ್ತವ್ಯವೆಂದು ಭಾವಿಸಿದರು.

ವಚನ ಶಾಸ್ತ್ರಸಾರ ಭಾಗ -೧

ಇದು ೧೯೨೧ ರಲ್ಲಿ ಪ್ರಥಮ ಆವೃತ್ತಿಯಾಗಿ ಬೆಳಕು ಕಂಡಿತು ಆಮೇಲೆ ದ್ವಿತೀಯ ಆವೃತ್ತಿಯಲ್ಲಿ ಹಲವಾರು ಹೊಸ ವಚನಗಳು ಸೇರಿ ಪೂರ್ವಾರ್ಧ (೧೯೩೧). ಉತ್ತರಾರ್ಧ (೧೯೩೩) ವೆಂಬ ಪ್ರತ್ಯೇಕ ಸಂಪುಟಗಳು ಪ್ರಕಟವಾದವು. ಇದು ಹಳಕಟ್ಟಿಯವರಿಂದ ಶೂನ್ಯ ಸಂಪಾದನೆಗಳಂತೆ ಮರುಪರಿಷ್ಕರಣವನ್ನು ಪಡೆಯಿತು. ಇದರ ಪೂರ್ವಾರ್ಧದಲ್ಲಿ ಭಕ್ತ ಮಾಹೇಶ್ವರ ಸ್ಥಲಗಳೂ ಉತ್ತರಾರ್ಧದಲ್ಲಿ ಪ್ರಸಾದಿ ಪ್ರಾಣಲಿಂಗ ಶರಣ ಐಕ್ಯಸ್ಥಲಗಳೂ ಇರುತ್ತದೆ. ದ್ವಿತೀಯ ಆವೃತ್ತಿಯ ಉತ್ತರಾರ್ಧ ಸಂಪುಟದ ಕೊನೆಯಲ್ಲಿ ೨೩೭ ವಚನಕಾರರ ಹೆಸರು, ಮುದ್ರಿಕೆಗಳನ್ನು ಜೋಡಿಸಲಾಗಿದೆ.

**ವಚನ ಶಾಸ್ತ್ರ ಸಾರ ಭಾಗ-೨**

ಈ ವಚನ ಸಂಪುಟದಲ್ಲಿ ೧ ಸೃಷ್ಟಿಯು ರಚನೆ, ೨. ಕರಣ ಹಸಿಗೆ, ೩. ಕ್ರಿಯೆಗಳು ಮತ್ತು ಸಕೀಲಗಳು ೪. ಷಟ್‌ಸ್ಥಲಗಳು ೫. ಏಕೋತ್ತರ ಶತ ಸ್ಥಲಗಳು ಹೀಗೆ ಐದು ಭಾಗಗಳಿರುತ್ತವೆ. ಅಂತ್ಯದಲ್ಲಿ ೧೪ ಅನುಬಂಧಗಳಿವೆ.

**ವಚನಶಾಸ್ತ್ರ ಸಾರ ಭಾಗ-೩**

ಈ ಸಂಪುಟದಲ್ಲಿ ಕ್ರಿಯೆ ಆಚಾರ ಭೇದಗಳು ಅಷ್ಟಾವರಣಗಳು , ಶಿವಯೋಗಗಳು, ಪೂರ್ವಾರ್ಧದಲ್ಲಿದ್ದರೆ, ಪಾದೋದಕ , ಪ್ರಸಾದ , ಶಿವಾನುಭವ, ಶಬ್ದಕೋಶದ ಅವತರಣಿಕೆಗಳು, ವಿಭೂತಿ, ರುದ್ರಾಕ್ಷಿ, ಮಂತ್ರ ವಿಷಯುಗಳು ಉತ್ತರಾರ್ಧದಲ್ಲಿ ಸಮಾವೇಶಗೊಂಡಿರುತ್ತದೆ. ಪ್ರಯೋಜನೆ, ಪ್ರಯಿತ್ನ ದೃಷ್ಟಿಯಿಂದ ವಚನಶಾಸ್ತ್ರಸಾರ ಸಂಪುಟಗಳು ಶೂನ್ಯ ಸಂಪಾದನೆಯ ಶಿಲ್ಪಿ ಶಿವಗಣ ಪ್ರಸಾದಿ ಮಹಾದೇವಯ್ಯಗಳ ಸಂಯೋಜಕ ಶಿಲ್ಪಿ ನೆನಪಿಸಿ ಕೊಡುತ್ತಿವೆ.

ಹಳಕಟ್ಟಿಯುವರಿಗೆ ಹಾನಗಲ್ಲ ಕುಮಾರ ಸ್ವಾಮಿಗಳು ಹಾಗೂ ಬಬಲೇಶ್ವರದ ಶಾಂತವೀರ ಸ್ವಾಮಿಗಳು ಮೊದಲಾದವರ ಸಹಾಯವಿದ್ದರೂ ನಾವು ಈ ಪ್ರಕಾರ ಇಪ್ಪತ್ತೊಂಬತ್ತು ವರ್ಷಗಳವರೆಗೆ ಎಡೆಬಿಡದೆ ಪ್ರಯಿತ್ನ ಮಾಡಿದ್ದರ ಪರಿಣಾಮವು ಈಚೆಗೆ ದೃಗ್ಗೋಚರವಾಗಿದೆ. ಈವರೆಗೆ ನಮ್ಮ ಸಮಾಜದಲ್ಲಿ ವಿದ್ಯಾವಂತರೂ ಸ್ವಾಮಿಗಳೂ ವ್ಯಾಪಾರಸ್ಥರೂ ಕೆಲವು ಅಪವಾದಗಳನ್ನು ಬಿಟ್ಟು ನಮಗೆ ಎಷ್ಟು ಮಾತ್ರವೂ ಸಹಾನುಭೂತಿ ತೋರಿಸಿರುವುದಿಲ್ಲ. ಎಂಬ ಅವರ ಹೇಳಿಕೆಯಿಂದ ಅಂದಿನ ವೀರಶೈವ ಸಮಾಜ ಹಳಕಟ್ಟಿಯವರ ಬಗೆಗೆ ಅವರ ವಚನ ಸಾಹಿತ್ಯ ಪ್ರಕಟನೆಯ ಬಗೆಗೆ ನಡೆದುಕೊಂಡ ರೀತಿ ಮನವರಿಕೆ ಯಾಗುವುದಲ್ಲದೆ. ಸಮಾಜದವರಿಂದ ಮಠ ಮಾನ್ಯಗಳಿಂದ ವಚನ ಸಾಹಿತ್ಯ , ಹಸ್ತಪ್ರತಿಗಳ ಬಗೆಗೆ ವಿಶೇಷ ಆಸಕ್ತಿ ಗೌರವ ಹೊಂದಿದ್ದರು. ಮನಸ್ಸು ಮಾಡಿದ್ದರೆ ಫ.ಗು. ಹಳಕಟ್ಟಿಯವರು ವಚನ ಸಾಹಿತ್ಯ ಪ್ರಕಟನೆಗಳನ್ನು ಶಿವಯೋಗ ಮಂದಿರವೇ ತರಬಹುದಾಗಿದ್ದಿತು. ಆದರೆ ಅವರು ಆ ರೀತಿಯಾಗಿ ಮಾಡದೆ ಆ ಪ್ರಕಟನೆಗಾಗಿ ತಮ್ಮ ಸ್ವಂತ ಹಣವನ್ನೇ ವ್ಯಯಿಸಿದರು ತಮ್ಮ ಜೀವತಲ ದಿಂದ ವಚನಸಾಹಿತ್ಯ ಜ್ಯೋತಿ ನಾಡನ್ನು ಬೆಳಗುವಂತೆ ಮಾಡಿದರು.

ಫ. ಗು. ಹಳಕಟ್ಟಿಯವರು ಪ್ರಕಟಿಸಿದ ಹತ್ತು ಸಾವಿರ ಪುಟಗಳಿಗೂ ಮಿಕ್ಕಿದ ವೀರಶೈವ ಸಾಹಿತ್ಯದಲ್ಲಿ ವಚನ ಸಾಹಿತ್ಯಕ್ಕೆ ಸಿಂಹಪಾಲು ಸಲ್ಲುತ್ತದೆ. ಅಲ್ಲಿಯವರೆಗೆ ಕೇವಲ ೬೦ ವಚನಕಾರರು ಗೊತ್ತಿದ್ದರು. ಹಳಕಟ್ಟಿಯವರ ಮೂಲಕ ೩೦೦ ಕ್ಕೂ ಹೆಚ್ಚಿನ ವಚನಕಾರರು ಬೆಳಕಿಗೆ ಬಂದರು.

ಫ. ಗು. ಹಳಕಟ್ಟಿ ಹಾಗೂ ಚೆನ್ನಮಲ್ಲಿಕಾರ್ಜುನರಂಥ ಕಾಯಕ ಜೀವಿಗಳು ಒಂದು ವೇಳೆ ಮನಸ್ಸು ಮಾಡದಿದ್ದರೆ ವಚನ ಸಾಹಿತ್ಯ ಗ್ರಂಥಗಳು ಪ್ರಕಟವಾಗದೆ ಕತ್ತಲೆಯ ಗರ್ಭದಲ್ಲಿಯೇ ಕರಗಿ

ಹೋಗುತ್ತಿದ್ದವು. ಜೊತೆಗೆ ವೀರಶೈವ ಧರ್ಮ ಸಾಹಿತ್ಯಗಳ ಪರಿಚಯ ಪ್ರಸಾರ ಕಾರ್ಯಗಳೂ ನಡೆಯುತ್ತಿರಲಿಲ್ಲ. ಆದ್ದರಿಂದ ಇವರಿಬ್ಬರು ವೀರಶೈವ ಧರ್ಮ ಸಾಹಿತ್ಯ ಸಂಸ್ಕೃತಿಗಳನ್ನು ಬದುಕಿಸಿಕೊಟ್ಟ ವೀರ ಶೈವ ಸಂಜೀವಿನಿಯೆನಿಸಿದ್ದಾರೆ.

ಡಾ. ಹಳಕಟ್ಟಿಯವರು ಸಂಪಾದಿಸಿದ ಮತ್ತು ರಚಿಸಿದ ಗ್ರಂಥಗಳ ಸಂಖ್ಯೆ ದೊಡ್ಡದು. ಅವು ಮೂರು ಬಗೆಗಳಲ್ಲಿ ಸಿಗುತ್ತವೆ.

೧) 'ಶಿವಾನುಭವ ಗ್ರಂಥ ಮಾಲೆ'ಯ ಪುಸ್ತಕಗಳು ಇವುಗಳಲ್ಲಿ ಕೆಲವು ಮೊದಲು ಶಿವಾನುಭವ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿ ಆ ಮೇಲೆ ಗ್ರಂಥರೂಪದಲ್ಲಿ ಬೆಳಕು ಕಂಡಿವೆ . ಕೆಲವು ನೇರವಾಗಿ ಮಾಲೆಯಲ್ಲಿ ಪ್ರಕಟವಾಗಿವೆ.

೨) ಕೆಲವು ಮಾಲೆಯ ಹೆಸರು ಸಂಖ್ಯೆಗಳಿಲ್ಲದೆ ನೇರವಾಗಿ ಪ್ರಕಟವಾಗಿವೆ.

೩) ಕೆಲವು ಗ್ರಂಥಗಳಾಗಿ ಹೊರ ಬರದೆ ಪತ್ರಿಕೆಯಲ್ಲಿ ಉಳಿದಿವೆ.

ಈ ಪುಸ್ತಕಗಳಲ್ಲಿ ಒಂದಿಷ್ಟು ಅನೇಕ ಆವೃತ್ತಿಗಳಾಗಿ ಹೊರ ಬಂದಿವೆ. ಅವುಗಳಲ್ಲಿ ಪ್ರತಮ ಇಲ್ಲವೆ ಅಂತಿ ಆವೃತ್ತಿ ಆಯ್ದುಕೊಳ್ಳಬೇಕೆಂಬ ನಮ್ಮ ಧೋರಣೆ ಕೈಗೂಡದ ಕಾರಣ ಲಭ್ಯವಾದ ಯಾವುದೋ ಆವೃತ್ತಿಯನ್ನು ಆಯ್ದುಕೊಂಡಿದ್ದೇವೆ. ಹೀಗೆ ಆಯ್ದುಕೊಂಡ ಅವರ ಪುಸ್ತಕಗಳನ್ನು ಶಿವಾನುಭವ ಪತ್ರಿಕೆಯಲ್ಲಿ ಪ್ರಕಟವಾದ ಅವರ ಲೇಖನಗಳನ್ನು ಈ ರೀತಿ ವರ್ಗೀಕರಿಸಲಾಗಿದೆ. ೧ ರಿಂದ ೬ 'ವಚನ ಸಾಹಿತ್ಯ'ವನ್ನು ಕುರಿತು ಸಂಪುಟಗಳು ೭ನೆಯದು 'ವಚನ ವಿವೇಚನೆ' ಯನ್ನು ಕುರಿತು ಸಂಪುಟ ೮ ಮತ್ತು ೯ 'ಕಾವ್ಯ ಸಾಹಿತ್ಯ' ವನ್ನು ಕುರಿತು ಸಂಪುಟಗಳು ೧೦ರಿಂದ ೧೨ 'ಚರಿತ್ರ ಸಾಹಿತ್ಯ' ವನ್ನು ಕುರಿತು ಸಂಪುಟಳು ೧೩ ರಿಂದ ೧೫ 'ಲೇಖನ ಸಾಹಿತ್ಯ' ವನ್ನು ಕುರಿತು ಸಂಪುಟಗಳು ಈ ಸಂಪುಟಗಳ ವಿವರಗಳು ಹೀಗಿವೆ.

ಸಂಪುಟ ೧ – ವಚನ ಸಾಹಿತ್ಯ –೧ : ಸಂಪಾದಕರು: ಡಾ. ಎಸ್.ಆರ್. ಗುಂಜಾಳ

೧. ಶ್ರೀ ಬಸವೇಶ್ವರನ ವಚನಗಳು.

೨. ಸಟಿಕ ಬಸವೇಶ್ವರನ ವಚನಗಳು

೩. ಹೊಸ ಪದ್ದತಿಯ ಬಸವಣ್ಣನವರ ವಚನಗಳು

೪. ಪ್ರಭುದೇವರ ವಚನಗಳು

೫. ಶ್ರೀ ಚೆನ್ನಬಸವೇಶ್ವರ ವಚನಗಳು

ಸಂಪುಟ ೨ – ವಚನ ಸಾಹಿತ್ಯ –೨ : ಸಂಪಾದಕರು: ಡಾ. ಬಸವರಾಜ ಜಗಜಂಪಿ

೧. ಶೂನ್ಯ ಸಂಪಾದನೆ

೨. ಸಟೀಕ ಶೂನ್ಯ ಸಂಪಾದನೆ (ಸಿದ್ದರಾಮಯ್ಯ ದೇವರ ಸಂಪಾದನೆ –ತೃತೀಯೋಪದೇಶ)

೩. ಸಟೀಕ ಶೂನ್ಯ ಸಂಪಾದನೆ (ಸಿದ್ದರಾಮಯ್ಯದೇವರ ಗುರುಕರುಣ –ದಶಮೋಪದೇಶ)

೪. ಶೂನ್ಯ ಸಂಪಾದನೆ (ಭಕ್ತ ಜಂಗಮಸ್ಥಲ ಪಂಚಮೋಪದೇಶ)

೫. ಸಿದ್ಧಲಿಂಗೇಶ್ವರ ಏಕೋತ್ತರಶತ ಸ್ಥಲ

ಸಂಪುಟ ೩ – ವಚನ ಸಾಹಿತ್ಯ –೩ : ಸಂಪಾದಕರು : ಡಾ. ಗುಂಡಣ್ಣ ಕಲಬುರ್ಗಿ

೧. ಅಮುಗಿದೇವಯ್ಯನ ವಚನಗಳು

೨. ಅಂಬಿಗರ ಚೌಡಯ್ಯನ ವಚನಗಳು

೩. ಆತುರ ವೈರಿ ಮಾರೇಶ್ವರ ವಚನಗಳು

೪. ಆದಯ್ಯನ ವಚನಗಳು

೫. ಉರಿಲಿಂಗಪೆದ್ದಿಯ ವಚನಗಳು

೬. ಗಣದಾಸಿ ವೀರಣ್ಣನ ವಚನಗಳು

೭. ದೇವರ ದಾಸಿಮಯ್ಯನ ವಚನಗಳು

೮. ಶ್ರೀ ಮಡಿವಾಳ ಮಾಚಿದೇವನ ವಚನಗಳು

೯. ಮಹಾದೇವಿಯಕ್ಕನ ವಚನಗಳು

೧೦. ಮರೆಮಿಂಡ ದೇವನ ವಚನಗಳು

೧೧. ಮೋಳಿಗೆ ಮಾರಯ್ಯನ ವಚನಗಳು

೧೨. ಲಿಂಗಮ್ಮನ ವಚನಗಳು

೧೩. ಸಕಲೇಶ ಮಾದರಸನ ವಚನಗಳು

೧೪. ಸಿದ್ಧರಾಮೇಶ್ವರನ ವಚನಗಳು

೧೫. ಹಡಪದಪ್ಪಣ್ಣನ ವಚನಗಳು

ಸಂಪುಟ : ೪ – ವಚನ ಸಾಹಿತ್ಯ –೪ : ಸಂಪಾದಕರು: ಡಾ. ಎ. ಎಸ್. ಮಾಳಿ

೧. ಶಿವಶರಣರ ಸಂಕೀರ್ಣ ವಚನಗಳು –೧ (ಗಜೇಶ ಮಸಣಯ್ಯ ಚಂದಿಮರಸ, ಅರಿವಿನ ಮಾರಿ ತಂದೆ)

೨. ಶಿವಶರಣರ ಸಂಕೀರ್ಣ ವಚನಗಳು –೨ ( ಹಾವಿನಾಳ ಕಲ್ಲಿ ದೇವ , ಮಧುವರಸ, ಸತ್ಯಕ್ಕ ಶಿವತಿಂಕ ಮಿಂಚಣ್ಣ, ಉರಿಲಿಂಗ ದೇವ , ಬಾಹೂರ ಬೊಮ್ಮಯ್ಯ

೩. ಶಿವಶರಣರ ಸಂಕೀರ್ಣ ವಚನಗಳು –೨ (ಭಾಂಡಾರಿ ಶಾಂತಯ್ಯ , ಉಲೇಶ ಕೇತಯ್ಯ, ಸೊಡ್ಡಳ ಬಾಚರಸ, ಹಡಪದಪ್ಪಣ್ಣನ ಸ್ವರ ವಚನ , ಮಂತ್ರಗೌಪ್ಯ , ಗುಮ್ಮಾಳಪುರ ಸಿದ್ದಲಿಂಗ ದೇವರ ವಚನ)

೪. ಕಾಲಜ್ಞಾನ ವಚನಗಳು

೫. ಘನಲಿಂಗನ ವಚನಗಳು

೬. ಶಿವಾನುಭವ ಸೃಷ್ಟಿಯ ವಚನಗಳು (ಸ್ವತಂತ್ರ ಸಿದ್ದಲಿಂಗನ ಮುಕ್ತಾಂಗನೆ ಕಂಠಮಾಲೆ ಜ್ಯೋತಿರ್ಮಯ ಶಾಂಭವಿದೀಕ್ಷಾ ಬೋಧೆ)

೭. ಸಕಲಾಗಮ ಶಿಖಾಮಣಿ

೮. ಸಂಗನ ಬಸವೇಶ್ವರನ ವಚನ

೯. ವೇಮಣ್ಣ ಯೋಗಿಯ ವಚನಗಳು

ಸಂಪುಟ : ೫ – ವಚನ ಸಾಹಿತ್ಯ –೫ : ಸಂಪಾದಕರು: ಡಾ. ಎಂ. ಎಂ. ಕಲಬುರ್ಗಿ

೧. ವಚನಶಾಸ್ತ್ರ ಸಾರ ಭಾಗ –೧

ಸಂಪುಟ : ೬ – ವಚನ ಸಾಹಿತ್ಯ –೬ : ಸಂಪಾದಕರು: ಡಾ. ವೀರಣ್ಣ ರಾಜೂರ

೧. ವಚನಶಾಸ್ತ್ರಸಾರ ಭಾಗ–೨

೨. ವಚನಶಾಸ್ತ್ರ ಸಾರ ಭಾಗ –೩

೩. ಶಿವಾನುಭವ ಶಬ್ದ ಕೋಶ

ಸಂಪುಟ : ೭ – ವಚನ ವಿವೇಚನೆ –೭ : ಸಂಪಾದಕರು: ಡಾ. ಜೆ.ಎಂ. ನಾಗಯ್ಯ

೧. ಲಿಂಗಪೂಜೆಯ ತತ್ವಗಳು – ೧೯೨೬

೨. ಲಿಂಗಪೂಜೆಯ ತತ್ವಗಳು – ೧೯೩೫

೩. ಭಕ್ತಿಯ ವಚನಗಳು

೪. ನೈತಿಕ ಮತ್ತು ಭಕ್ತಿಯ ವಚನಗಳು

೫. ಪರಮಾತ್ಮನ ಸ್ವರೂಪ

೬. ಲಿಂಗ ಮತ್ತು ಪರಮಾತ್ಮ

೭. ಶಿವಾನುಭವ ಸತ್ಯ ಮಾರ್ಗ

೮. ಬಸವೇಶ್ವರನ ತತ್ವಗಳು

೯. ಶಿವಶರಣರ ಅಹಿಂಸಾಧರ್ಮ

೧೦. ಸಂಗೀತದಲ್ಲಿ ಶಿವಶರಣರ ವಚನಗಳು

ಸಂಪುಟ : ೮ – ಕಾವ್ಯ ಸಾಹಿತ್ಯ –೧ : ಸಂಪಾದಕರು: ಡಾ. ಬಿ. ವಿ. ಮಲ್ಲಾಪುರ

೧. ಹರಿಹರನ ರಗಳೆ – ೧

೨. ಹರಿಹರನ ರಗಳೆ – ೨

೩. ಹರಿಹರನ ರಗಳೆ – ೩

೪. ಹರಿಹರನ ರಗಳೆ – ೪

೫. ಹರಿಹರನ ರಗಳೆ – ೫

೬. ಹರಿಹರನ ರಗಳೆ – ೬

೭. ಹರಿಹರನ ರಗಳೆ – ೭

೮. ಹರಿಹರನ ರಗಳೆ – ೮

೯. ವೀರಶೈವ ರಗಳೆ

೧೦. ಶ್ರೀ ತೋಂಟದಾರ್ಯರ ರಗಳೆ

ಸಂಪುಟ : ೯ – ಕಾವ್ಯ ಸಾಹಿತ್ಯ –೨ : ಸಂಪಾದಕರು: ಡಾ. ಬಾಳಣ್ಣ ಸೀಗೀಹಳ್ಳಿ

೧. ಪದ ಮಂತ್ರ ಗೋಪ್ಯ

೨. ನೂರೊಂದರ ಹಾಡುಗಳು

೩. ಸಟೀಕ ಏಕೋತ್ತರ ಶತಸ್ಥಲ

೪. ಕವಿ ಗುರುಬಸವಕೃತ ಅವಧೂತ ಗೀತೆ

೫. ಪ್ರಾಣಲಿಂಗ ಜ್ಞಾನದರ್ಪಣ ಚಾರಿತ್ರ

೬. ಶಿವಯೋಗಾಚರಣೆ

೭. ಶಿವಶರಣರ ಪದಗಳು ೧

೮. ಹರಳಯ್ಯನ ತ್ರಿಪದಿ

೯. ಮೈಲಾರ ಬಸಪ್ಪನ ಶಿವಾನುಭವ ದರ್ಪಣ

೧೦. ಹಾನಗಲ್ಲ ಸ್ವಾಮಿಗಳವರು

೧೧. ಬಸವೇಶ್ವರನ ಷಟ್‌ಸ್ಥಲ ವಚನದ ಕಥಾಸಾರ

೧೨ .ನಿರಂಜನ ವಂಶ ರತ್ನಾಕರ

೧೩. ಭೈರವೇಶ್ವರ ಕಾವ್ಯದ ಕಥಾ ಮಣಿ ಸೂತ್ರ ರತ್ನಾಕರ

೧೪. ವರದಾನಿ ಗುಡ್ಡವ್ವಯ ಚರಿತ್ರೆ

೧೫. ನಾಗಭೂಷಣ ಗನಮಠದಾರ್ಯರ ಕೃಪಿಜ್ಞಾನ ಪ್ರದೀಪಿಕೆ

೧೬. ಕೊಡಗಿನ ಸಂಸ್ಥಾನದ ರಾಜೇಂದ್ರನಾಮೆ

೧೭. ಕೆಳದಿ ಸಂಸ್ಥಾನದ ರಾಯರ ವಂಶಾವಳಿ

ಸಂಪುಟ : ೧೦ – ಚಾರಿತ್ರ ಸಾಹಿತ್ಯ –೧ : ಸಂಪಾದಕರು: ಡಾ. ಎಸ್.ಕೆ. ಕೊಪ್ಪಾ, ಡಾ. ಎಂ.ಎಂ. ಪಡಶೆಟ್ಟಿ

೧. ಶಿವಶರಣರ ಚರಿತ್ರೆಗಳ ಭಾಗ–೧

೨. ಅರವತ್ಮೂರು ಶಿವಶರಣರ ಚರಿತ್ರೆಗಳು ಭಾಗ–೨

೩. ಶಿವಶರಣರ ಚರಿತ್ರೆಗಳು ಭಾಗ–೩

೪. ಶಿವಶರಣರ ಚರಿತ್ರೆಗಳು ಭಾಗ–೪

ಸಂಪುಟ : ೧೧ – ಚರಿತ್ರ ಸಾಹಿತ್ಯ –೨ : ಸಂಪಾದಕರು: ಡಾ. ಎಂ.ಎಸ್. ಮದಭಾವಿ

೧. ಬಸವೇಶ್ವರ ಚರಿತ್ರೆ

೨. ಶಿವಶರಣೆಯರ ಚರಿತ್ರೆಗಳು

೩. ಬ್ರಾಹ್ಮಣ ಶಿವಶರಣರ ಚರಿತ್ರೆಗಳು

೪. ೨೨೦ ಅಮರಗಣಾಧೀಶ್ವರರ ಚರಿತ್ರೆಗಳು

೫. ಸಾರಂಗ ಮಠಾಧೀಶ್ವರರು.

ಸಂಪುಟ : ೧೨ – ಚರಿತ್ರ ಸಾಹಿತ್ಯ –೩ : ಸಂಪಾದಕರು: ಡಾ. ಸಿದ್ದಲಿಂಗ ದೇಸಾಯಿ

೧. ವೀರಶೈವ ರಾಜಮನೆತನಗಳ ಚರಿತ್ರೆಗಳು

೨. ಕೈ.ವಾ. ಚೆನ್ನಬಸಪ್ಪ ಬಸವಲಿಂಗಪ್ಪ ಧಾರವಾಡ ಇವರ ಚರಿತ್ರೆಯು

೩. ೪ನೇ ಶ್ರೀ ಮದ್ವೀರಶೈವ ಮಹಾಸಭೆಯ ರಿಪೋರ್ಟ್

೪. ದೇವರ ದಾಸಿಮಾರ್ಯ ಪ್ರಶಸ್ತಿ

ಸಂಪುಟ : ೧೩ – ಲೇಖನ ಸಾಹಿತ್ಯ –೧ : ಸಂಪಾದಕರು: ಡಾ. ಬಿ.ಎಂ. ಪಾಟೀಲ

ಸಂಪುಟ : ೧೪ – ಲೇಖನ ಸಾಹಿತ್ಯ –೨ : ಸಂಪಾದಕರು: ಡಾ. ಪಿ.ಕೆ. ರಾಠೋಡ

ಸಂಪುಟ : ೧೫ – ಲೇಖನ ಸಾಹಿತ್ಯ –೩ : ಸಂಪಾದಕರು: ಡಾ. ಸರಸ್ವತಿದೇವಿ ಭಗವತಿ, ಡಾ.ಎಚ್.ಎಸ್. ಮೇಲಿನಮನಿ

ಹಳಕಟ್ಟಿಯವರು ಹಮ್ಮಿಕೊಂಡಿದ್ದ ಗ್ರಂಥ ಪ್ರಕಟಣೆ ಯೋಜನೆಗೆ ಸಂಬಂಧಿಸಿದಂತೆ ಕೆಲವು ಕೃತಿಗಳು ಬೆಳಕು ಕಾಣಲೇ ಇಲ್ಲ. ಹೀಗಾಗಿ ಮೇಲಿನ ಸಂಪುಟಗಳು ಬೆಳಕು ಕಂಡ ಸಾಹಿತ್ಯವನ್ನೊಳಗೊಂಡಿವೆ.

**ಶಿ. ಶಿ. ಬಸವನಾಳ**

೧೮೯೩ ನೆಯ ನವೆಂಬರ ೨ ರಂದು ಹಾವೇರಿಯಲ್ಲಿ ಜನಿಸಿದ ಶಿವಲಿಂಗಪ್ಪನವರ ತಾಯಿ ಹೆರೂರು ಮನೆತನದ ಸಿದ್ಧಮ್ಮ ತಂದೆ ಶಿವಯೋಗಪ್ಪ ಬಳ್ಳಾರಿ ಜಿಲ್ಲೆಯ ಕೊಟ್ಟೂರಿನವರು ತೋರಣಗಲ್ಲು , ದರೋಜಿ ಮುಂತಾದೆಡೆ ಸ್ಟೇಶನ್ ಮಾಸ್ತರರಾಗಿ ಕೆಲಸ ಮಾಡುತ್ತಿದ್ದರು. ಪ್ರಾಥಮಿಕ ಶಿಕ್ಷಣ ಮುಗಿಸಿದ್ದು ತೆಲಗು ಮಾಧ್ಯಮದಲ್ಲಿ ಸುಶಿಕ್ಷಿತರಾದ ತಂದೆಯವರು ಮನೆಯಲ್ಲಿಯೇ ಕನ್ನಡ ಸಂಸ್ಕೃತ ಕಲಿಸಿದರು. ಬಳ್ಳಾರಿಯ ವಾಡ್ಲಾ ಹೈಸ್ಕೂಲಿನಿಂದ ಗದಗಿಗೆ ಬಂದು ಮುಂದೆ ಧಾರವಾಡದ ಸರಕಾರಿ ಹೈಸ್ಕೂಲು ಸೇರಿ ಶಿವಲಿಂಗಪ್ಪ ೧೯೧೦ ರಲ್ಲಿ ಮ್ಯಾಟ್ರಿಕ್ ಪಾಸಾದರು ಬಾಲ್ಯದಲ್ಲಿಯೇ ಕುಶಲಬುದ್ದಿ ವಿದ್ಯಾ ವ್ಯಾಸಂಗದಲ್ಲಿ ಮನಸ್ಸುಳ್ಳ ಬಸವನಾಳರ ಶಿಕ್ಷಣ ಪ್ರಗತಿಯು ನಿರಾತಂಕವಾಗಿ ಸಾಗಿತ್ತು. ೧೯೧೧ ರಲ್ಲಿ ಪುಣೆಯ ಡೆಕ್ಕನ್ ಕಾಲೇಜ ಸೇರಿದ ಇವರು ಪ್ರಿನ್ಸಿಪಾಲ್ ಎಫ್. ಡಬ್ಲ್ಯು ಬೇನ ಅವರ ಅಚ್ಚು ಮೆಚ್ಚಿನ ಶಿಷ್ಯರಾಗಿ ಅವರು ಬೋಧಿಸುತ್ತಿದ್ದ ಇತಿಹಾಸ ಅರ್ಥಶಾಸ್ತ್ರ ವಿಷಯಗಳನ್ನು ತೆಗೆದುಕೊಂಡು ಬಿ.ಎ. ಆನರ್ಸ್ ಆದರು.

ಬಸವಣ್ಣನವರ ವಚನಗಳ ಒಂದು ಸಾಮಾನ್ಯ ಸಂಸ್ಕರಣ ಮತ್ತು ಇನ್ನೊಂದು ಗ್ರಂಥಾಲಯ ಸಂಸ್ಕರಣ ಹೀಗೆ ಎರಡು ಬೇರೆ ಬೇರೆ ಸಂಸ್ಕರಣಗಳನ್ನು ಪ್ರಕಟಿಸಬೇಕೆಂದು ಉದ್ದೇಶಿಸಿದ "ಸಾಹಿತ್ಯ ಸಮಿತಿ" ೧೯೫೧ ರಲ್ಲಿ ಸಾಮಾನ್ಯ ಸಂಸ್ಕರಣವನ್ನು ಗ್ರಂಥಾಲಯದಲ್ಲಿ ಸಂಸ್ಕರಣವನ್ನು ಪ್ರಕಟಿಸಿತು ಈ ಎರಡು ಪ್ರಕಾರದ ಆವೃತ್ತಿಗಳ ಸಂಪಾದನೆಯ ಹೊಣೆಯನ್ನು ಶ್ರೀ ಬಸವನಾಳರು ಹೊತ್ತರು.

ಸಾಮಾನ್ಯ ಸಂಸ್ಕರಣದಲ್ಲಿ ಕೇವಲ ವಚನಗಳನ್ನು ಮಾತ್ರ ಮುದ್ರಿಸಲಾಗಿದೆ. ವಚನಗಳ ಅಕರಾದಿ, ಕಠಿಣಸಬ್ದಗಳ ಕೋಶ, ಪ್ರಸ್ತಾವನೆ ಈ ಎಲ್ಲ ವಿವರಗಳಿವೆ. ಆದರೆ ವಚನಗಳ ಪಾಠಾಂತರಗಳು ಮಾತ್ರ ಇಲ್ಲ. ಈ ಎಲ್ಲ ಅಂಶಗಳನ್ನು ಹಾಗೂ ವಚನಗಳ ಪಾಠಾಂತರಗಳನ್ನು 'ಗ್ರಂಥಾಲಯ ಸಂಸ್ಕರಣ' ಒಳಗೊಂಡಿದೆ ಸಾಮಾನ್ಯ ಸಂಸ್ಕರಣವು ಪ್ರಕಟವಾದ ಕೆಲವೆ ದಿನಗಳಲ್ಲಿ ತುಂಬಾ ಜನಪ್ರಿಯತೆ ಪಡೆಯಿತು. ೧೯೫೪ ರಲ್ಲಿ ಎರಡನೆಯ ಮುದ್ರಣವನ್ನು ಕಂಡಿತು.

ಈ ಮೊದಲು ಬಸವಣ್ಣನವರ ವಚನ ಅನೇಕ ಸಲ ಪ್ರಕಟವಾಗಿದ್ದಿತು. ಬಸವನಾಳರ ಈ ಆವೃತ್ತಿ "ಮುನ್ನಿನ ಕಬ್ಬಮನೆಲ್ಲಮಿಕ್ಕಿ ಮುಟ್ಟಿದವು" ಎಂಬ ಪಂಪನ ಮಾತು ನೆನಪಾಗುವ ರೀತಿಯಲ್ಲಿ ಶಾಸ್ತ್ರಬದ್ಧವಾಗಿ ಹೊರಬಂದಿತು. ಪ್ರಸ್ತಾವನೆ ಪರಿಷ್ಕರಣ ಎರಡೂ ನೆಲೆಗಳಲ್ಲಿ ಅಪೂರ್ವತೆಯನ್ನು ಸಾಧಿಸುವ ಮೂಲಕ ಮುಂಬರುವ ವಚನ ಪರಿಷ್ಕರಣ ಕ್ರಿಯೆಗೆ ಹೊಸ ಮಾರ್ಗವನ್ನು ತೆರೆದು ತೋರಿಸಿತು.

ಆದರೆ ೧೯೬೨ ರಲ್ಲಿ ಪ್ರಕಟವಾದ ಗ್ರಂಥಾಲಯ ಸಂಸ್ಕರಣ ಆವೃತ್ತಿ ಬಸವನಾಳರಿಗೆ ದೊಡ್ಡ ಕೀರ್ತಿಯನ್ನು ತಂದುಕೊಟ್ಟಿತು. ಐದು ಟೀಕಿನ ವಚನಗಳ ಕಟ್ಟುಗಳು ಎರಡು ಕೋರಿ ಕಾಗದದ ಪ್ರತಿಗಳು ಹದಿನೈದು ತಾಳೆಗರಿಗಳು ಪ್ರತಿಗಳು ಹೀಗೆ ಒಟ್ಟು ಇಪ್ಪತ್ತೆರಡು ಮಾತೃಕೆಗಳಿಂದ ಇದನ್ನು ಸಿದ್ಧಪಡಿಸಲಾಗಿದೆ. ಈ ಕೃತಿಯಲ್ಲಿ ೪೮ ಪುಟಗಳ ಪ್ರಸ್ತಾವನೆ ೧೬ ಪುಟಗಳ ಬಸವಣ್ಣನವರ ಜೀವನ ಚರಿತ್ರೆ ಕೊನೆಗೆ ವಚನಗಳ ಆಕಾರಾದಿ ಶಬ್ದಕೋಶ ಅನುಬಂಧ ರೂಪದಲ್ಲಿ 'ಹೆಚ್ಚಿಗೆ ದೊರೆತ ವಚನಗಳು' ಇವೆಲ್ಲವನ್ನು ಕೊಡಲಾಗಿದೆ.

ಬಸವನಾಳರು ಪ್ರಸ್ತಾವನೆಯ ಒಂಬತ್ತು ಭಾಗಗಳಲ್ಲಿ ವಚನ ಸಾಹಿತ್ಯ ಮತ್ತು ವಚನ ರೂಪದ ಬಗೆಗೆ ಹಲವು ಹೊಸ ವಿಚಾರಗಳನ್ನು ಪ್ರಸ್ತಾಪಿಸುವುದರ ಜೊತೆಗೆ ತಾವು ಪರಿಷ್ಕರಣದಲ್ಲಿ ಅನುಸರಿಸಿದ ಹೊಸ ವಿಧಾನವನ್ನು ಪ್ರಭಾವಶಾಲಿಯಾಗಿ ಪ್ರತಿಪಾದಿಸಿದ್ದಾರೆ. ಸಂಶೋಧನೆಗೆ ಸಂಶೋಧನೆ ಸಂಪಾದನೆಗೆ, ಸಂಪಾದನೆ ವಿಮರ್ಶೆಗೆ ವಿಮರ್ಶೆ ಎನಿಸಿದ ಇದು ಕನ್ನಡದ ಒಂದು ಅಪೂರ್ವ ಬರವಣಿಗೆಯಾಗಿದೆ. ಓದುತ್ತಿದ್ದಂತೆಯೇ ತಕ್ಷಣ ಅದರ ಸೊಬಗಿಗೆ ಮಂತ್ರಮುಗ್ಧರಾಗುತ್ತವೆ. ಅದರ ತೂಕಬದ್ಧ ಹಾಗೂ ಹೃದ್ಯ ನಿರೂಪಣೆ ಈ ಮುಂದಿನಂತಿವೆ. " ಕನ್ನಡ ಸಾಹಿತ್ಯದ ಒಂದು ವಿಶಿಷ್ಟವಾದ ಬಹು ಅಮೌಲ್ಯವಾದ ಭಾಗವೆಂದರೆ ವಚನ ಸಾಹಿತ್ಯ ಈ ಬಗೆಯ ಸಾಹಿತ್ಯದಂತಹ ಉದಾಹರಣೆಗಳು ವಿರಳವಾಗಿ, ಕ್ವಚಿತ್ತಾಗಿ ಬಿಡಿಬಿಡಿಯಾಗಿ ಒಂದೆರಡು ಇತರ ಭಾಷೆಗಳ ಸಾಹಿತ್ಯದಲ್ಲಿ ಸಿಕ್ಕಬಹುದಾದರೂ ವಚನಗಳು ಸಾಹಿತ್ಯದ ಒಂದು ಪ್ರಕಾರವಾಗಿ ನೇರ್ಪುಟ್ಟುದು ಕನ್ನಡದಲ್ಲಿಯೇ ಎಂದು ನಿಸ್ಸಂದೇಹವಾಗಿ ಹೇಳಬಹುದು ಅಂತೆಯೆ ವಚನ ಸಾಹಿತ್ಯವು ಕನ್ನಡ ನುಡಿ ವಿಶ್ವಸಾಹಿತ್ಯಕ್ಕೆ ಕೊಟ್ಟ ಅಪೂರ್ವ ಕಾಣಿಕೆಯೆಂದು ಕನ್ನಡಿಗರ ಹೆಮ್ಮೆ ಪಡಬಹುದಾಗಿದೆ.

ಸಂಸ್ಕೃತದ ಹಿರಿಮೆ ಸಡಿಲಿ ಕನ್ನಡದ ಹೆಚ್ಚಳ ಬೆಳೆದುದು ಈ ವಚನ ಸಾಹಿತ್ಯದಿಂದ ಬಹುಕಾಲದಿಂದಲೂ ಪಂಡಿತರ ತುತ್ತಾಗಿದ್ದ ವಿಶಿಷ್ಟ ವರ್ಗದವರ ಸೊತ್ತಾಗಿದ್ದ ರಾಜ್ಯಲಕ್ಷ್ಮಿಯ ತೊತ್ತಾಗಿದ್ದ ಸರಸ್ವತಿಯ ಸಂಸ್ಕೃತ ಭಂಡಾರವನ್ನು ಕಡೆಗಣಿಸಿ ತಮ್ಮ ಅನುಭವದ ಕಮ್ಮಟದಲ್ಲಿಯೇ ಅಚ್ಚೊತ್ತಿದ್ದ ವಚನ ನಾಣ್ಯಗಳನ್ನು ಜನ ಸಾಮಾನ್ಯರೆಲ್ಲರಲ್ಲಿ ಸಲ್ಲುವಂತೆ ಹರಡಿಸಿದವರು ವಚನಕಾರರು, ದೇವವಾಣಿಗೆ ಜನವಾಣಿಯಾಗುವುದು. ಅಸಾಧ್ಯವಾದಾಗ ಜನವಾಣಿಯನ್ನೇ ದೇವವಾಣಿಯ ಮಟ್ಟಕ್ಕೇರಿಸಿದ

ಪವಾಡ ವೀರಶೈವ ವಚನಕಾರರದು. ಬಸವನಾಳರ ಇಂಥ ಸುಸಂಬದ್ಧವಾದ ಬರವಣಿಗೆ ಶೈಲಿಯನ್ನು ಬೇರೆಯವರಲ್ಲಿ ಕಾಣುವುದು ವಿರಳ

ಬಸವಣ್ಣನವರ ವಚನಗಳ ಪರಿಷ್ಕರಣದ ಇತಿಹಾಸದಲ್ಲಿ ಬಸವನಾಳರ ಪರಿಷ್ಕರಣಕ್ಕೆ ತನ್ನದೇ ಆದ ಮಹತ್ವವಿದೆ. ಇವರಿಗಿಂತ ಮೊದಲು ಶ್ರೀ ಬ. ಮರಿಶಂಕರ ದೇವರು ೧೮೮೯ ರಲ್ಲಿ 'ಬಸವಣ್ಣನವರ ವಚನಗಳು' ಕೃತಿಯನ್ನು ಪ್ರಕಟಿಸಿದ್ದರು. ೧೯೨೬ ರಲ್ಲಿ ಫ.ಗು. ಹಳಕಟ್ಟಿಯವರ 'ಶ್ರೀ ಬಸವೇಶ್ವರನ ವಚನಗಳು ಕೃತಿಯನ್ನು ಹೊರತಂದಿದ್ದರು. ೧೯೬೨ ರಲ್ಲಿ ಬೆಳಕು ಕಂಡ ಬಸವನಾಳರ ಆವೃತ್ತಿ (ಗ್ರಂಥಾಲಯ ಸಂಸ್ಕರಣ) ಒಂದು ಮೈಲಿಗಲ್ಲು , ವಚನಗಳ ಪರಿಷ್ಕರಣಕೆಕ, ಮುದ್ರಣಕ್ಕೆ ಹೊಸ ವಿನ್ಯಾಸವನ್ನು ಕೊಟ್ಟ ಕೀರ್ತಿ ಬಸವನಾಳರಿಗೆ ಸಲ್ಲುತ್ತದೆ. ಅವರ ಅಗಾಧವಾದ ಪಾಂಡಿತ್ಯ ವಚನ ಪರಿಷ್ಕರಣದ ಮೇಲೆ ವಿಶಿಷ್ಟವಾದ ಬೆಳಕನ್ನು ಚೆಲ್ಲಿದೆ ಇಂದು ಬಸವಣ್ಣನವರ ವಚನಗಳ ಹಲವಾರು ಪರಿಷ್ಕರಣಗಳು ಬಳಕೆಯಲ್ಲಿದ್ದರೂ ಬಸವನಾಳರ ಪರಿಷ್ಕರಣವು ವಿದ್ವಾಂಸರಿಂದ ಅಧಿಕೃತವೆಂದು ಗುರುತಿಸಲ್ಪಡುತ್ತಿದೆ.

ಧಾರವಾಡ ಕನ್ನಡ ಅಧ್ಯಯನ ಪೀಠದ ತೃತೀಯ ಘಟ್ಟ
ಆರ್.ಸಿ. ಹಿರೇಮಠ

ವಚನಗಳು ವಚನಕಾರರ ಮುಕ್ತ ಮನಸ್ಸಿನ ನೇರ ಅಭಿವ್ಯಕ್ತಿಗಳು ಇವು ಅಂದಿನ ಸಮಾಜದಲ್ಲಿ ಸಾಮಾಜಿಕ, ಧಾರ್ಮಿಕ, ಆರ್ಥಿಕ ಸ್ವಾತಂತ್ರ್ಯ ಹಾಗೂ ಸಮಾನತೆಗಳನ್ನು ಒಟ್ಟಾರೆ ಮಾನವೀಯ ಮೌಲ್ಯಗಳನ್ನು ಅನುಷ್ಠಾನಗೊಳಿಸಲು ಕಲ್ಯಾಣಕ್ರಾಂತಿಯಿಂದ ಮಾಡಿದ ಅಭಿವ್ಯಕ್ತಿಗಳು ವಚನ ಸಾಹಿತ್ಯ ನಾಡಿನ ತುಂಬ ವ್ಯಾಪಕವಾಗಿ ಹರಡಿಕೊಂಡಿತು. ಧರ್ಮಾನುಯಾಯಿಗಳಲ್ಲಿ ಧರ್ಮಾಧಿಕಾರಿಗಳಲ್ಲಿ ನಿಕ್ಷಿಪ್ತಗೊಂಡಿತು. ಹಸ್ತ ಪ್ರತಿಗಳ ರೂಪದಲ್ಲಿದ್ದ ಇದು ಕಾಲಾಂತರದಲ್ಲಿ ಕನ್ನಡಿಗರ ಅನಾವರ ಅಲಕ್ಷ್ಯ ಉದಾಸೀನೆಗಳಿಗೆ ಒಳಗಾಗುತ್ತ ಬಂದಿತು. ಜೊತೆಗೆ ಧಾರ್ಮಿಕ ಸಂಘರ್ಷ ಜನರ ಅಜ್ಞಾನ, ಮೂಢನಂಬಿಕೆಗಳಿಗೆ ಗುರಿಯಾಗಿ ನಾಶವಾಗುತ್ತ ನಡೆಯಿತು. ಹೀಗೆ ನಾಶವಾಗುತ್ತ ಹೋಗುತಿಲಿದ್ದ ನಾಡಿನ ಅಮೂಲ್ಯ ಸಾಹಿತ್ಯ ಸಂಪತ್ತಾದ ಈ ವಚನ ಸಾಹಿತ್ಯವನ್ನು ಸಂಗ್ರಹಿಸುವ ಪ್ರಕಟಿಸುವ ಕಾರ್ಯ ಒಂಬತ್ತನೆಯ ಶತಮಾನದಲ್ಲಿ ಆರಂಭವಾಯಿತು. ವಚನ ಸಾಹಿತ್ಯವನ್ನು ಅಂದಿನ ಪುಸ್ತಕ ವ್ಯಾಪಾರಿಗಳು ಧರ್ಮಾಭಿಮಾನದಿಂದಲೂ ವ್ಯಾಪಾರಿ ದೃಷ್ಟಿಯಿಂದಲೂ ಮುದ್ರಿಸಿ ಪ್ರಕಟಿಸುತ್ತ ಬಂದರೂ ನಂತರ ವಚನ ಸಾಹಿತ್ಯವನ್ನು ಅಂದಿನ ಪುಸ್ತಕ ವ್ಯಾಪಾರಿಕಗಳು ಧರ್ಮಾಭಿಮಾನದಿಂದಲೂ ವ್ಯಾಪಾರಿ ದೃಷ್ಟಿಯಿಂದಲೂ ಮುದ್ರಿಸಿ ಪ್ರಕಟಿಸುತ್ತ ಬಂದರೂ ನಂತರ ವಚನ ಸಾಹಿತ್ಯವನ್ನು ತಕ್ಕ ಮಟ್ಟಿಗೆ ತತ್ವ ಶುದ್ಧವಾಗಿ ಸಂಪಾದಿಸಿ ಪ್ರಕಟಿಸಿದವರು ಫ.ಗು.ಹಳಕಟ್ಟಿಯವರು ಇವರ ನಂತರ ಬೂದಿಹಳ್ಳಿಮಠ ಪ್ರಭುಸ್ವಾಮಿಗಳು, ಹುಬ್ಬಳ್ಳಿ ಹೊಸಮಠದ ಸಿದ್ದವೀರ ದೇವರು ಮತ್ತು ಶಿ.ಶಿ. ಬಸವನಾಳರು ಶಾಸ್ತ್ರ ಶುದ್ಧವಾಗಿ ಸಂಪಾದಿಸಿ ಪ್ರಕಟಿಸಿದರು.

ಉತ್ತರ ಕರ್ನಾಟಕದಲ್ಲಿ ಪ್ರಮುಖವಾಗಿ ಈ ಕ್ಷೇತ್ರದಲ್ಲಿ ಮನಮಟಟ್ಟಿ ಕೆಲಸ ಮಾಡಿ ವಿಪುಲ ಸಂಖ್ಯೆಯ ವಚನ ಸಂಕಲನ ಸಂಗ್ರಹ ಸಂಪಾದನ ಕೃತಿಗಳನ್ನು ಯೋಜನಾಬದ್ದವಾಗಿ ಶಾಸ್ತ್ರಶುದ್ದವಾಗಿ ಸಂಪಾದಿಸಿದವರಲ್ಲಿ ಆರ್.ಸಿ. ಹಿರೇಮಠ ಅವರ ಹೆಸರು ಅಗ್ರಸ್ಥಾನದಲ್ಲಿ ಇರುವಂಥದು ಈ ಮೂಲಕ ವಚನ ಸಾಹಿತ್ಯ ವೈವಿಧ್ಯತೆ ವಿಪುಲತೆ ವೈಶಿಷ್ಟ್ಯಗಳನ್ನು ಸಾಹಿತ್ಯ ಲೋಕಕೆಕ ಪರಿಚಯಿಸಿಕೊಟ್ಟ ಕೀರ್ತಿ ಆರ್.ಸಿ. ಹಿರೇಮಠ ಅವರದಾಗಿದೆ. ಇವರು ಪರಿಷ್ಕರಿಸಿ ಸಂಪಾದಿಸಿದ ವಚನ ಸಾಹಿತ್ಯ.

ಸಂಪಾದನಾ ಕೃತಿಗಳ ವಿವರ ಹೀಗಿದೆ

೧. ಧಾರವಾಡ ಮುರಘಾಮಠದ ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳ ಗ್ರಂಥಮಾಲೆ

೧. ಷಟ್‌ಸ್ಥಲ ಜ್ಞಾನ ಸಾರಾಮೃತ (೧೯೬೪)

೨. ಬಸವಣ್ಣನವರ ವಚನಗಳು (೧೯೮೮)

೨. ಕರ್ನಾಟಕ ವಿಶ್ವವಿದ್ಯಾಲಯದ 'ಸಮಗ್ರ' ವಚನ ವಾಙ್ಮಯ ಸಂಶೋಧನ ಸಂಸ್ಕರಣ ಮತ್ತು ಪ್ರಕಟನೆ ಯೋಜನೆಯಡಿಯಲ್ಲಿ

೧. ಷಟ್‌ಸ್ಥಲ ಚಕ್ರವರ್ತಿ ಚನ್ನಬಸವಣ್ಣನವರ ವಚನಗಳು (೧೯೬೫)

೨. ಶಿವಶರಣೆಯರ ವಚನಗಳು (ಸಮಗ್ರ ಸಂಪುಟ) ೧೯೬೮

೩. ಮಹಾದೇವಿಯಕ್ಕನ ವಚನಗಳು (೧೯೬೮)

೪. ನೀಲಮ್ಮ ವಚನಗಳು ಮತ್ತು ಲಿಂಗಮ್ಮನ ಬೋಧೆಯ ವಚನಗಳು (೧೯೬೮)

೫. ಇಪ್ಪತ್ತೇಳು ಶಿವಶರಣೆಯರ ವಚನಗಳು (೧೯೬೮)

೬. ಅಮುಗೆ ರಾಯಮ್ಮ ಮತ್ತು ಅಕ್ಕಮ್ಮನ ವಚನಗಳು (೧೯೬೮)

೭. ಭಕ್ತಿ ಭಂಡಾರಿ ಬಸವೇಶ್ವರ ವಚನಗಳು(೧೯೬೮)

೮. ಸಿದ್ಧರಾಮೇಶ್ವರ ವಚನಗಳು (೧೯೬೮)

೯. ವೀರಶೈವ ಚಿಂತಾಮಣಿ (೧೯೭೦)

೧೦. ಮುಕ್ತಿ ಕಂಠಾಭರಣ (೧೯೭೧)

೧೧. ಶೂನ್ಯ ಸಂಪಾದನೆ (ಮಹಾದೇವಯ್ಯ ) ೧೯೭೧

೧೨. ವಿಶೇಷಾನುಭವ ಷಟ್‌ಸ್ಥಲ (೧೯೭೧)

೧೩. ಶೂನ್ಯ ಸಂಪಾದನೆ ಸಿದ್ದಲಿಂಗದೇವ ೧೯೭೨

೧೪. ಸಕಾಲ ಪುರಾತನರ ವಚನಗಳು (ಸಂಪುಟ ೧) ೧೯೭೩

೧೫. ಬ್ರಹ್ಮಾದ್ವೈತ ಸಿದ್ಧಾಂತ ಷಟ್‌ಸ್ಥಲಾಭರಣ (೧೯೭೩)

೧೬. ಪೋಮಮೂರುತಿ ಅಲ್ಲಮ ಪ್ರಭುದೇವರ ವಚನಗಳು (೧೯೭೬)

೩. ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳಿ ಮೂರುಸಾವಿರಮಠ ಹುಬ್ಬಳ್ಳಿ

೧. ಜೇಡರ ದಾಸಿಮಯ್ಯನ ವಚನಗಳು (೧೯೮೭)

ಹೀಗೆ ಸುಮಾರು ಮೂರು ದಶಕಗಳಲ್ಲಿ ವಚನ ಸಾಹಿತ್ಯ ಪರಿಷ್ಕರಣೆ ಪ್ರಕಟನೆಗಳಿಗೆ ಆರ್.ಸಿ. ಅವರು ಪವನ ವೇಗ ಹಾಗೂ ವ್ಯಾಪಕತೆಯನ್ನು ತಂದು ಕೊಟ್ಟರು. ಅವರ ಸಮರ್ಥ ನೇತೃತ್ವದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠವು ವಚನ ಸಾಹಿತ್ಯ ಪ್ರಕಟನೆ ಪರಿಷ್ಕರಣೆಗಳ ಪ್ರಮುಖ ಕೇಂದ್ರವಾಗಿ ಪರಿಣಮಿಸಿತು.

ವಚನ ವಾಙ್ಮಯ ಪ್ರಕಟನೆಯ ತೃತೀಯ ಘಟ್ಟವೆಂಬುದು ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಪೀಠವು ವಚನ ಸಾಹಿತ್ಯ ಪ್ರಕಟನೆ ಯೋಜನೆಯ ಮೂಲಕ ಅನೇಕ ಮಹತ್ವಪೂರ್ಣ ಕೃತಿಗಳನ್ನು ಹೊರತಂದ ಕಾಲವಾಗಿದೆ. ೧೯೬೧-೧೯೮೦ರ ಮಧ್ಯದ ಈ ಕಾಲಘಟ್ಟದಲ್ಲಿ ವಚನ ಸಾಹಿತ್ಯದ ಸಂಪಾದನೆ, ಪ್ರಕಟನೆಗಳ ಚಟುವಟಿಕೆ ಇಡೀ ಕರ್ನಾಟಕದ ತುಂಬ ನಡೆದುದು ಒಂದು ವಿಶೇಷ . ಹೀಗಾಗಿ ಡಾ. ಕಲಬುರ್ಗಿ ಅವರು ಇದನ್ನು ವಚನ ಸಂಪಾದನೆಯ ಸುಗ್ಗಿಯ ಕಾಲ ಅವಧಿಯಲ್ಲಿ ಬೆಳಕುಕಂಡಿದ್ದು ಇವುಗಳಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕೊಡುಗೆ ಸುಮಾರು ೮೦ ಆದ್ದರಿಂದ ಇದನ್ನು ಕನ್ನಡ ಅಧ್ಯಯನ ಪೀಟದ ಘಟ್ಟವೆಂದು ಕರೆದುದು ಅರ್ಥಪೂರ್ಣವಾಗಿದೆ.

೧೯೫೦ ರಲ್ಲಿ ಪ್ರಾರಂಭವಾದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗಕ್ಕೆ ೧೯೫೧ ರಲ್ಲಿ ಆಗಮಿಸಿದ ಡಾ. ಆರ್.ಸಿ. ಹಿರೇಮಠ ಅವರು ಪ್ರಾರಂಭದ ಅವಧಿಯಲ್ಲಿಕನ್ನಡ ಕಾವ್ಯ ಮಾಲೆಯನ್ನಾರಂಭಿಸಿ, ಕೆಲವು ಮೌಲಿಕ ಕೃತಿಗಳನ್ನು ಪ್ರಕಟಿಸಿದರು. ಆ ಮೇಲೆ ಅವರು ೧೯೬೨ ರಲ್ಲಿ ಕೈಗೆತ್ತಿಕೊಂಡ ವಚನವಾಙ್ಮಯ ಸಂಶೋಧನ ಸಂಪಾದನೆ ಪ್ರಕಟನೆ ಯೋಜನೆ ಪ್ರಾಚೀನ ಕೃತಿಗಳ ಸಂಪಾದನೆಯ ಇತಿಹಾಸದಲ್ಲಿಯೇ ಒಂದು ಅಪೂರ್ವ ಉಪಕ್ರಮವೆನಿಸಿತು. (ಸಂಪಾದನೆಯ ಇತಿಹಾಸದಲ್ಲಿಯೇ ಒಂದು) ಪುಣೆಯ ಭಂಡಾರಕರ ರಿಸರ್ಚ್ ಇನ್ಸ್ಟಿಟ್ಯುಟಿನ ಡಾ. ಸುಂಕನಕರ ಅವರು ಮಹಾಭಾರತವನ್ನು ಸಂಪಾದಿಸಿದ ಮಾದರಿಯಲ್ಲಿ ವಚನಗಳು ಸಂಪಾದಿಸಲು ರೂಪಿಸಿಕೊಂಡು ಈ ಯೋಜನೆಯಲ್ಲಿ ಸಂಶೋಧನೆಯ ಸಹಾಯಕರಾಗಿ ಡಾ. ಎಂ.ಎಂ. ಕಲಬುರ್ಗಿ, ಡಾ. ಜೆ.ಎಸ್. ಕುಳ್ಳಿ, ಪಂ. ನಾಗಭೂಷಣ ಶಾಸ್ತ್ರಿ, ಶ್ರೀ ವಿ.ರು.ಕೊಪ್ಪಳ, ಶ್ರೀ ಮೇವುಂಡಿ ಮಲ್ಲಾರಿ ಮೊದಲಾದವರು ಕೆಲಸ ಮಾಡಿದರು. ನಾಡಿನ ಮೂಲೆ ಮೂಲೆಯನ್ನೆಲ್ಲ ಸುತ್ತಿ ಅಂದು ಸುಮಾರು ೪೦೦೦ ಹಸ್ತ ಪ್ರತಿಗಳನ್ನು ಸಂಗ್ರಹಿಸಲಾಯಿತು. ಹೀಗೆ ಸಂಗ್ರಹಿಸಿದ ಹಸ್ತ ಪ್ರತಿಗಳಿಂದ ವಚನಗಳನ್ನು ಆಯ್ದುಕೊಂಡುದರ ಫಲವಾಗಿ ೧೯೬೫ ರಲ್ಲಿ 'ಷಟ್‌ಸ್ಥಲ ಚಕ್ರವರ್ತಿ ಚೆನ್ನಬಸವಣ್ಣನವರ ವಚನಗಳು' ಎಂಬ ಕೃತಿ ಹೊರ

ಬಂದಿತು. ಈ ಪೂರ್ವದಲ್ಲಿ ಡಾ. ಹಳಕಟ್ಟಿ ಅವರು ಕೇವಲ ೩೨೩ ವಚನಗಳನ್ನು ಪ್ರಕಟಿಸಿದ್ದರೆ ಇಲ್ಲಿ ೧೫೦೪ ವಚನಗಳಿದ್ದು ಸುಮಾರು ೮೦ ಆಕರಗಳಿಂದ ಸಂಗ್ರಹಿಸಲಾಗಿದೆ. ಪ್ರತ್ಯೇಕ ಸಂಪುಟವಾಗಿ ಪ್ರಕಟಿಸಿದ ೨೬೨ ಪುಟದ ಮೌಲಿಕ ಪ್ರಸ್ತಾವನೆಯು ಐತಿಹಾಸಿಕ ಹಿನ್ನೆಲೆ ಜೀವನ ಚರಿತ್ರೆ, ಷಟ್‌ಸ್ಥಲ ನಿರ್ಣಯ ಆಚಾರ ನಿರ್ಣಯ, ಶಿವಯೋಗ ನಿರ್ಣಯ, ಸಮಾಜ ವಿಮರ್ಶೆ, ಸಾಹಿತ್ಯಸಾಧೆ, ವ್ಯಕ್ತಿತ್ವ ಪ್ರಭಾವ ಮುದ್ರೆ, ಶರಣವಾಣಿಯಲ್ಲಿ ಚೆನ್ನಬಸವಣ್ಣ ಎಂಬ ವಿಷಯಗಳನ್ನೊಳಗೊಂಡಿದ್ದು ಚೆನ್ನಬಸವಣ್ಣನ ಜೀವನ ಚರಿತ್ರೆ ವೀರಶೈವ ಸಿದ್ಧಾಂಥಗಳನ್ನು ತಿಳಿಯಲು ಒಳ್ಳೆಯ ಆಕರವಾಗಿದೆ. ೧೧೨ ಪುಟದ ಗ್ರಂಥ ಸಂಸ್ಕರಣ ವಿಭಾಗದಲ್ಲಿ ಸಾಧನ ಸಂಪತ್ತಿ, ಪರಿಷ್ಕರಣ ಕ್ರಮ ಸಮಸ್ಯೆಗಳು ಬಸವಣ್ಣ ಚೆನ್ನಬಸವಣ್ಣನ ವಚನಗಳ ನಡುವೆ ಸಂದೇಹ- ಸಾಮ್ಯ, ಸಂಸ್ಕೃತ ಶ್ಲೋಕಗಳು, ಪಾಠ ನಿರ್ಣಯ ಪ್ರತಿಯೊಂದು ವಚನ ಎಷ್ಟು ಆಕರಗಳಲ್ಲಿ ಬಂದಿದೆ ಎಂಬುದರ ಸುದೀರ್ಘ ವಿವರಗಳು ಸಂಶೋಧಕರನ್ನು ಬೆರಗುಗೊಳಿಸುತ್ತವೆ.

ಈ ಸಂಸ್ಕರಣ ಪದ್ಧತಿಯಲ್ಲಿಯೇ ನಡೆದು ೧೩೨ ಪ್ರತಿಗಳನ್ನು ಬಳಸಿಕೊಂಡು ೧೩೭೮ ವಚನಗಳುಳ್ಳ ಶ್ರೀ ಸಿದ್ದರಾಮೇಶ್ವರ ವಚನಗಳು ಕೃತಿಯನ್ನು ೨೦೮ ಪುಟದ ಪ್ರಸ್ತಾವನೆ , ೯೦ ಪುಟದ ಪರಿಶಿಷ್ಟದೊಂದಿಗೆ ಹೊರತರಲಾಗಿದೆ. ೧೭೪ ಪ್ರತಿಗಳನ್ನು ಬಳಸಿಕೊಂಡು ೧೩೧೬ ವಚನಗಳುಳ್ಳ ಭಕ್ತಿ ಭಂಡಾರಿ ಬಸವಣ್ಣನವರ ವಚನಗಳು ಕೃತಿಯನ್ನು ೫೨ ಪುಟದ ಪ್ರಸ್ತಾವನೆ ೭೩ ಪುಟದ ಪರಿಶಿಷ್ಟದೊಂದಿಗೆ ಪ್ರಕಟಿಸಲಾಗಿದೆ. ಅದೇ ರೀತಿ ೫೧ ಹಸ್ತಪ್ರತಿಗಳನ್ನು ಉಪಯೋಗಿಸಿಕೊಂಡು ೧೪೨೭ ವಚನಗಳುಳ್ಳ ಪ್ರೊ ಅಲ್ಲಮಪ್ರಭುದೇವರ ವಚನಗಳು ಕೃತಿಯನ್ನು ೪೯ ಪುಟದ ಪ್ರಸ್ತಾವನೆ , ೨೨೦ ಪುಟದ ಪರಿಶಿಷ್ಟದೊಂದಿಗೆ ಹೊರತರಲಾಗಿದೆ. ಶಿವಶರಣೆಯರ ವಚನಗಳು' ಸಮಗ್ರ ಸಂಪುಟ ೩೨ ಜನ ವಚನಕಾರ್ತಿಯರ ಎಲ್ಲ ವಚನಗಳನ್ನು ಒಳಗೊಂಡಿದೆ. ಇದರಲ್ಲಿ ಅಕ್ಕಮಹಾದೇವಿಯ ೩೪೦ (ಅನುಬಂದದಲ್ಲಿ ಸೃಷ್ಟಿಯ ವಚನ ೧, ಹೆಚ್ಚಿನ ವಚನ ೨, ಯೋಗಾಂಗತ್ರಿ ನಿಧಿ, ಪದಗಳು ೧೭) ನೀಲಮ್ಮನ ೧೨೫ ಲಿಂಗಮ್ಮನ ೧೧೩ (ಅನುಬಂಧದಲ್ಲಿ ಮಂತ್ರಗೋಪ್ಯ ಮತ್ತು ಸ್ವರವಚನ ಮೋಳಿಗೆಯ ಮಹಾದೇವಿಯಮ್ಮನ, ೬೯, ಆಯ್ದಕ್ಕಿ ಲಕ್ಕಮ್ಮನ ೨೫, ಮುಕ್ತಾಯಕ್ಕನ ೩೨, ಸತ್ಯಕ್ಕನ ೨೮, ಅಕ್ಕನಾಗಮ್ಮನ ೧೨, ಗಂಗಾಂಬಿಕೆಯ ೮, ಬೊಂತಾದೇವಿಯ ೫, ಗೊಗ್ಗವ್ವೆಯ ೬, ಕದಿರ ರೆಮ್ಮವ್ವೆಯ ೪, ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀಯ್ರ್ , ರೇಕಮ್ಮನ ೧, ಉರಿಲಿಂಗಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆಯ ೧೩, ಮಸಣಮ್ಮನ ೧, ಗಂಗಮ್ಮನ ೧, ಲಕ್ಷ್ಮವ್ವನ ೧, ಕಾಮವ್ವನ ೧, ರೇಚವ್ವೆಯ ೧, ಕೇತಲ ದೇವಿಯ ೧, ಕೊಟ್ಟಣದ ಸೋಮವ್ವನ ೧, ಬಾಚಿಕಾಯಕದ ಕಾಳವ್ವೆಯ ೯, ವೀರಮ್ಮನ ೩, ಗುಡ್ಡವ್ವೆಯ ೧, ಅಕ್ಕಮನ ೩, ಕದಿರಕಾಯಕದ ಕಾಳವ್ವೆಯ ೧, ಕನ್ನಡಿ ಕಾಯಕದ ರೇವಮ್ಮನ ೧, ಸೊಳೆ ಸಂಕವ್ವೆಯ ೧, ಸಿದ್ದ ಬುದ್ದಯ್ಯಗಳ ಪುಣ್ಯಸ್ತ್ರೀ ಕಾಳವ್ವೆಯ ೧ ವಚನಗಳಿವೆ. ಇದು ಈ ಯೋಜನೆಯ ಒಂದು ಮಹತ್ವಪೂರ್ಣ ಸಂಪುಟವೆನಿಸಿದೆ.

ಚೆನ್ನಬಸವಣ್ಣನ ವಚನಗಳಲ್ಲಿ ಆಯಾ ವಚನಕ್ಕೆ ಸಂಬಂಧಿಸಿದ ಭಿನ್ನ ಪಾಠಗಳನ್ನು ಆ ಪುಟದ ಅಡಿಯಲ್ಲಿಯೇ ಕೊಟ್ಟು, ಬಳಸಿಕೊಂಡ ಪ್ರತಿಗಳ ವಿವರವನ್ನು ಆರಂಭದ 'ಗ್ರಂಥ ಸಂಸ್ಕರಣ' ವಿಭಾಗದಲ್ಲಿ ಹೇಳಿದ್ದರೆ ಸಿದ್ಧರಾಮೇಶ್ವರ ವಚನದಲ್ಲಿ ಈ ಪದ್ಧತಿಯೊಂದಿಗೆ ಆಯಾ ಪುಟುಗಳ ಅಡಿಯಲ್ಲಿಯೇ ಆಕರಗಳನ್ನು ಕೊಡುವ ಪದ್ಧತಿಯನ್ನು ಅನುಸರಿಸಲಾಗಿದೆ. ಆದರೆ ಮುಂದೆ ಬಸವಣ್ಣ ಪ್ರಭುದೇವ ಮತ್ತು ಶಿವಶರಣೆಯರ ವಚನಗ್ರಂಥಗಳಲ್ಲಿ ಆಆ ಪುಟದ ಅಡಿಯಲ್ಲಿ ವಚನ ಪಾಠಾಂತರ ಅದರ ಕೆಳಗೆ ಆ ಆ ವಚನಗಳಿಗೆ ಸಂಬಂಧಿಸಿದ ಆಕರ ಕೊಡಲಾಗಿದೆ. ಪ್ರತಿಯೊಂದು ವಚನದ ಸಾಚಾ ಖೊಟಾತನಗಳನ್ನು ತಿಳಿಯಲು ಈ ಆಕರ ತಂತ್ರ ಪ್ರಯೋಜಕವೆನಿಸಿದೆ.

ಬಸವಣ್ಣನವರ ವಚನಗಳ ಬಸವನಾಳ ಸಂಪುಟ ಇರುವಾಗಲೂ ಭಕ್ತಿಭಂಡಾರಿ ಬಸವಣ್ಣನವರ ವಚನಗಳು ಕೃತಿಯ ಸಂಪಾದನೆಯನ್ನು ಡಾ ಹಿರೇಮಠ ಅವರು ಕೈಗೆತ್ತಿಕೊಂಡು ವಿಪುಲ ಭಿನ್ನಪಾಠಗಳನ್ನು ಸಂಗ್ರಹಿಸಿದ್ದು ಹೆಚ್ಚಿನ ವಚನಗಳು ವಿಭಾಗವನ್ನು ಹೆಚ್ಚು ಶಿಸ್ತು ಪಡಿಸಿದ್ದು ಇವರ ಕೊಡುಗೆಯಾಗಿದೆ. ಬಸವನಾಳರ ಹೆಚ್ಚಿನ ೩೮೪ ವಚನಗಳಲ್ಲಿ ೫೭ ಪುದರುಕ್ತ ೪೭ ಚನ್ನಬಸವಣ್ಣ ವಚನ ೧ ಉಗ್ಗಡಿಸುವ ಗಬ್ಬಿದೇವನ ವಚನಗಳಿರುವುದನ್ನು ಗುರುತಿಸಿ, ಅವನ್ನು ಕಳೆದು ಉಳಿದು ೨೭೯ ವಚನಗಳಿಗೆ ಬೇರೆ ಬೇರೆ ಆಕರ ಹುಡುಕಿ ೧೭೪ ವಚನಗಳನ್ನು ಹೊಸದಾಗಿ ಸೇರಿಸಿ ಒಟ್ಟು ೧೩೧೬ ವಚನಗಳುಳ್ಳ ಸಂಪುಟವನ್ನು ಹೊರತಂದರು.

ಇವೆಲ್ಲ ಒಬೊಬ್ಬ ಶರಣರಿಗೆ ಸಂಬಂಧಿಸಿದ ವಚನ ಗ್ರಂಥಗಳು, ಬೇರೆ ಬೇರೆ ಹಸ್ತಪ್ರತಿಗಳಲ್ಲಿ ದೊರೆಯುವ ಅವರವರ ವಚನಗಳನ್ನು ಹುಡುಕಿ ಒಂದೆಡೆಗೆ ಶೇಖರಿಸಿ ಪುನರುಕ್ತಿಗಳನ್ನು ಕೈಬಿಟ್ಟು, ಮುದ್ರಿಕೆಗಳ ಪಲ್ಲಟವನ್ನು ಸರಿಪಡಿಸಿ ಪರಿಷ್ಕರಿಸಿ ಪ್ರಕಟಿಸುವುದು ಎಷ್ಟು ಪರಿಶ್ರಮದ ಕೆಲಸವೆಂಬುದು ಆ ಕ್ಷೇತ್ರದಲ್ಲಿ ದುಡಿದವರಿಗೆ ಗೊತ್ತು.

೧೨ನೆಯ ಶತಮಾನದ ವಚನಗಳನ್ನು ಸಂಗ್ರಹಿಸುವ ಸಂಕಲಿಸುವ , ಸಂಪಾದಿಸುವ ಕಾರ್ಯ ೧೫ನೆಯ ಶತಮಾನದಿಂದ ಪ್ರಾರಂಭವಾಯಿತು ಹೀಗೆ ಮೂಡಿ ಬಂದವು ಹಲವಾರು ಮಹತ್ವ ಪೂರ್ಣ ಸಂಪಾದಿತ ಕೃತಿಗಳು ಡಾ. ಆರ್.ಸಿ. ಹಿರೇಮಠ ಅವರು ಇನ್ನು ಪರಿಷ್ಕರಿಸುವ ಕಾರ್ಯವನ್ನು ಕೈಗೆತ್ತಿಕೊಂಡರು ಇವುಗಳಲ್ಲಿ ಪ್ರಾಚೀನ ಸಂಪಾದನಕಾರರು ತಮ ತಮಗೆ ದೊರೆತ ವಚನಗಳನ್ನು ಸೇರಿಸುತ್ತ ಹೋದ ಸಕಲ ಪುರಾತನರ ವಚನ ಕಟ್ಟುಗಳು ಮುಖ್ಯವಾದವು. ಕೋಲಶಾಂತಯ್ಯ , ಬಸವಣ್ಣ, ಗೊಗ್ಗವ್ವೆಯರ ವಚನಗಳಿಂದ ಪ್ರಾರಂಭವಾಗುವ ಈ ಕೃತಿಗಳಲ್ಲಿ ಕ್ರಮವಾಗಿ ೩೦೦೦, ೧೦೦೦, ೧೫೦೦ ವಚನಗಳಿವೆ ೧೬ ತಾಡೋಲೆ ಗ್ರಂಥಗಳಿಂದ ಈ ಮೂರು ಕೃತಿಗಳನ್ನು ಕ್ರೋಢಿಕರಿಸಿ ಮೊದಲನೆಯ ಸಂಪುಟದಲ್ಲಿ ಕೋಲಶಾಂತಯ್ಯ ಮೊದಲಾದ ೧೬ ಜನ ವಚನಕಾರರ ೨೯೩ ವಚನಗಳನ್ನು ಪರಿಷ್ಕರಿಸಿ ಕೊಟ್ಟರು ಇಂತಹ ಇನ್ನೊಂದು ಪ್ರಯತ್ನ ಶೂನ್ಯ ಸಂಪಾದನೆಗಳ

ಪ್ರಕಟನೆ ಸೂನ್ಯ ಸಂಪಾದನೆಯ ಕಲ್ಪನೆಗೆ ಗಂಗೋತ್ರಿಯಾದ ಶಿವಗಣ ಪ್ರಸಾದಿಗಳ ಶೂನ್ಯ ಸಂಪಾದನೆ (೧೯೭೧) ಮತ್ತು ಗಮ್ಮಳಾಪುರದ ಸಿದ್ದಲಿಂಗದೇವರ ಶೂನ್ಯ ಸಂಪಾದನೆಗಳನ್ನು ಡಾ. ಹಿರೇಮಠ ಅವರು ಶಾಸ್ತ್ರೀಯವಾಗಿ ಸಂಪಾದಿಸುತ್ತ ಪ್ರಸ್ತಾವನೆಯಲ್ಲಿ ನಾಲ್ಕು ಸೂನ್ಯ ಸಂಪಾದನೆಗಳ ಕಾಲ ನಿರ್ಣಯ, ಅವುಗಳ ಪರಸ್ಪರ ಸಾದೃಶ್ಯ ವೈದೃಶ್ಯ ಪ್ರಥಮೋಪದೇಶದಿಂದ ಎಲ್ಲ ಗಣಂಗಳ ಐಕ್ಯದವರೆಗಿನ ೨೦ ಅಧ್ಯಾಯಗಳಲ್ಲಿ ಉಕ್ತವಾಗಿರುವ ವಚನಕಾರರ ವಚನ ಮತ್ತು ಸ್ವರ ವಚನಗಳ ವಿವರ, ಆಯಾ ಸಂಪಾದನೆಗಳ ವೈಶಿಷ್ಟ್ಯ ಹಾಗೂ ವಿನೂತನತೆಗಳನ್ನು ಎತ್ತಿ ತೋರಿಸಿದ್ದಾರೆ. ಇವಲ್ಲದೆ ವಿಶೇಷಾನುಭವ ಷಟ್ಸ್ಥಲ (೧೯೭೧) ಬ್ರಹ್ಮಾದ್ವೈತ ಸಿದ್ಧಾಂತ ಷಟ್ಸ್ಥಲಾಭರಣ ಮೊದಲಾದ ಕೃತಿಗಳನ್ನು ಸಂಪಾದಿಸಿದ್ದಾರೆ. ಇವುಗಳ ಪ್ರಸ್ತಾವನೆಯಲ್ಲಿ ಬೇರೆ ಬೇರೆ ಅನುಭಾವಿಗಳು ಕಲ್ಪಿಸಿರುವ ಸ್ಥಲಕಟ್ಟಿನ ವಿವರಣೆ ಇದ್ದು ವೀರಶೈವ ಸಿದ್ಧಾಂತದ ಅಭ್ಯಾಸಿಗಳಿಗೆ ಮಹತ್ವಪೂರ್ಣ ಆಕರವೆನಿಸಿವೆ.

ಒಟ್ಟಾರೆ ಡಾ. ಆರ್.ಸಿ. ಹಿರೇಮಠ ಅವರ ವಚನ ಗ್ರಂಥಗಳ ಸಂಪಾದನೆಯ ವೈಶಿಷ್ಟ್ಯವನ್ನು ಈ ರೀತಿ ಗುರುತಿಸಬಹುದು

೧) ಮೊದಲು ಪ್ರಕಟವಾದ ವಚನ ಗ್ರಂಥಗಳನ್ನು ಹೆಚ್ಚು ಪ್ರತಿಗಳ ಆಧಾರದಿಂದ ಪರಿಷ್ಕರಿಸಿ ಒಬ್ಬ ವಚನಕಾರನ ವಚನ ಮೊತ್ತವನ್ನು ಗುರುತಿಸಿ ಕೊಟ್ಟಿದ್ದು

೨) ಈ ಮೊದಲು ಪ್ರಕಟವಾಗದ ಪ್ರಾಚೀನ ಸಮಕಲನಗ್ರಂಥಗಳನ್ನು ಬಹಳಷ್ಟು ಪ್ರತಿಗಳ ಬೆಳಕಿನಲ್ಲಿ ಸಂಪಾದಿಸಿ ಪ್ರಕಟಿಸಿದ್ದು.

೩) ಈ ಮೊದಲು ಪ್ರಕಟವಾದ ಆದರೆ ಪ್ರತಿಗಳು ದೊರಕದ ವಚನ ಗ್ರಂಥಗಳನ್ನು ಆಧುನಿಕ ಗ್ರಂಥ ಸಂಪಾದನ ಪದ್ದತಿಯಲ್ಲಿ ಪರಿಷ್ಕರಿಸಿ ಪ್ರಕಟಿಸಿದ್ದು

೪) ಕೇವಲ ಗ್ರಂಥ ಸಂಪಾದನಾ ಜ್ಞಾನವನ್ನಷ್ಟೇ ಅಲ್ಲದೆ ಸಂಶೋಧನಾತ್ಮಕ, ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಕ , ವಿಮರ್ಶಾತ್ಮಕ ಹಾಗೂ ಭಾಷಾ ಶಾಸ್ತ್ರೀಯ ಜ್ಞಾನಗಳ ವಿಪುಲ ವಿದ್ವತ್ತಿನಿಂದ ಹೊಸ ಹೊಸ ತಾಂತ್ರಿಕ ವಿಧಾನಗಳಿಂದ ಸಂಪಾದನಾ ಕಾರ್ಯವನ್ನು ಪೂರ್ಣ ಪ್ರಮಾಣದಲ್ಲಿ ಪೂರೈಸಿದ್ದು

೫) ಅಪೂರ್ವ ಪೀಠಿಕೆ, ಪ್ರಸ್ತಾವನೆ ಹಾಗೂ ಸಂಪಾದನಾ ಸಾಮಗ್ರಿಗಳನ್ನು ವಚನ ಸಾಹಿತ್ಯಕ್ಕೆ ಒದಗಿಸಿ ಹಿಂದೆಂದೂ ಕಾಣದ ವಚನವಾಙ್ಮಯದ ವಿಸ್ತಾರವನ್ನು ಯೋಜನೆಯ ಮೂಲಕ ಕನ್ನಡಿಗರಿಗೆ ದಿಗ್ದರ್ಶಿಸಿದ್ದು

ಒಂದು ದೊಡ್ಡ ಯೋಜನೆಯಲ್ಲಿ ಸಣ್ಣ ಪುಟ್ಟ ಕೊರತೆಗಳು ಕಾಣಿಸಿಕೊಳ್ಳುವುದು. ಅನಿವಾರ್ಯ ಈ ಮೇರೆಗೆ ಹೇಳುವುದಾದರೆ ಪ್ರತಿಯೊಬ್ಬ ಶರಣನ ಎಲ್ಲ ವಚನಗಳನ್ನು ಸಂಗ್ರಹಿಸುವ ಉದ್ದೇಶ

ಇವರದಾಗಿದ್ದರೂ ಚೆನ್ನಬಸವಣ್ಣನ ವಚನಗಳ, ಸಕಲ ಪುರಾತನರ ವಚನಗಳ ಮೂಲ ಕಟ್ಟುಗಳನ್ನು ಉಳಿಸಿಕೊಂಡು ಈ ಕಾರ್ಯ ಮಾಡಿದ್ದರೆ ಮೂಲ ಸಂಕಲನಕಾರರ ಆಶಯುವನ್ನು ಅರಿಯಲು ಸಾದ್ಯವಾಗುತ್ತಿತ್ತು. ಎಷ್ಟೇ ಎಚ್ಚರ ವಹಿಸಿದ್ದರೂ ವಚನ ಸಾಹಿತ್ಯದ ಪ್ರಕಟನೆಗಳಿಗೂ ಅನ್ವಯಿಸುವ ಮಾತು. ಹೀಗಿದ್ದೂ ಇಂಥ ಒಂದೆರಡು ದೋಷಗಳನ್ನೇ ಮುಂದು ಮಾಡಿ ಡಾ. ಹಿರೇಮಠ ಅವರ ಕೊಡುಗೆಯನ್ನು ಜನ ಸರಿಯಾಗಿ ಗ್ರಹಿಸದೆ ಹೋದದ್ದು, ೩೪ ಪುಟದ ಪೀಠಿಕೆಯಲ್ಲಿ ವಚನ ಸಾಹಿತ್ಯದ ವಿಪುಲತೆ ಪ್ರಕಟನೆ ಅಕ್ಕಮಹಾದೇವಿಯ ಚರಿತ್ರೆಯ ಮೊದಲಾದವನ್ನು ವಿವರಿಸಲಾಗಿದೆ. ಕೊನೆಯಲ್ಲಿ ಅಕ್ಕನನ್ನು ಪ್ರಸ್ತಾಪಿಸುವ ಕನ್ನಡ ಕೃತಿಗಳ ಪಟ್ಟಿಯನ್ನು ಕೊಡಲಾಗಿದೆ. ಇದು ಅಕ್ಕ ಮಹಾದೇವಿಯ ಚರಿತ್ರೆಯನ್ನು ಅಭ್ಯಸಿಸುವವರಿಗೆ ದಿಕ್ಸೂಚಿಯಂತಿದೆ. ಇವರು ಸಂಪಾದಿಸಿರುವ ಮತ್ತೊಂದು ಕೃತಿ ದೇವರ ದಾಸಿಮಯ್ಯನ ವಚನಗಳು ೧೪ ಪ್ರತಿಗಳಿಂದ ಸಿದ್ದಪಡಿಸಿದ ಈ ಕೃತಿಯಲ್ಲಿ ೧೫೦ ವಚನಗಳಿವೆ. ವಚನಗಳ ಕೆಳಗೆ ಅಡಿ ಟಿಪ್ಪಣಿ ರೂಪದಲ್ಲಿ ದಾಸಿಮಯ್ಯನ ವಚನಗಳಿಗೆ ಸಂವಾದಿಯಾದ ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಸರ್ವಜ್ಞ ಮೊದಲಾದವರ ವಚನಗಳನ್ನು ಕೊಡಲಾಗಿದೆ. ಕೆಲವು ವಚನಗಳಿಗೆ ಲಿಂಗಲೀಲಾ ವಿಲಾಸ ಚಾರಿತ್ರ, ವಚನಶಾಸ್ತ್ರಸಾರ ಮೊದಲಾದ ಕೃತಿಗಳ ವ್ಯಾಖ್ಯಾನವನ್ನು ಕೊಡಲಾಗಿದೆ. ಪ್ರಸ್ತಾವನೆಯಲ್ಲಿ ಜೇಡರ ದಾಸಿಮಯ್ಯ ಮುದನೂರ ದಾಸಿಮಯ್ಯ ದೇವರ ದಾಸಿಮಯ್ಯ ಎಂಬ ಹೆಸರುಗಳು ಬಸವಪೂರ್ಣಯುಗದ ಪ್ರಸಿದ್ದ ವಚನಕಾರನಾದ ಒಬ್ಬನೇ ವ್ಯಕ್ತಿಗೆ ಅನ್ವಯಿಸುವವು ಎಂಬ ನಿರ್ಧಾರಕ್ಕೆ ಬರಲಾಗಿದೆ. ಒಟ್ಟಾರೆ " ಈ ಕೃತಿಗಳಲ್ಲಿ ಇವರ ಪಾಂಡಿತ್ಯ ಪರಿಶ್ರಮಗಳು ಮುಡುಗಟ್ಟಿ ನಿಂತಿವೆ. ಅಭ್ಯಾಸ ಪೂರ್ಣ ಪ್ರಸ್ತಾವನೆ , ವೈವಿಧ್ಯ ಪೂರ್ಣ ಅನುಬಂಧಗಳು ಇವರ ಸಂಪಾದನೆಯ ವೈಶಿಷ್ಟಗಳ ಸಾಂಸ್ಥಿಕವಾದ ಯಾವ ನೆರವೂ ಇಲ್ಲದೆ ಹಸ್ತ ಪ್ರತಿ ನಕಲು ಮಾಡುವ ಪಾಠಾಂತರ ಗುರುತಿಸುವ ಶುದ್ಧ ಪಾಟ ನಿರ್ಣಯಿಸುವ ಪ್ರಸ್ತಾವನೆ ಬರೆಯುವ ಕ್ಲೇಶಕರ ಅನುಬಂಧ ರಚಿಸುವ ಶುದ್ದ ಪ್ರತಿ ಸಿದ್ದ ಮಾಡುವ ಕೊನೆಗೆ ಅಚ್ಚಿನ ಕರಡನ್ನು ತಾವೇ ನೋಡುವವರೆಗಿನ ಎಲ್ಲ ಕೆಲಸವನ್ನು ಒಬ್ಬರೆ ಮಾಡಿದುದು ಆಶ್ಚರ್ಯವನ್ನುಂಟು ಮಾಡುತ್ತದೆ.

## ಗದುಗಿನ ಶ್ರೀ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆಯ ಚತುರ್ಥ ಘಟ್ಟ

ವಚನ ಸಾಹಿತ್ಯ ಕನ್ನಡನಾಡಿನ ಒಂದು ಅದ್ಭುತ ಸೃಷ್ಟಿ ವ್ಯಕ್ತಿ ಕಲ್ಯಾಣ ಮತ್ತು ಸಮಾಜ ಕಲ್ಯಾಣಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅರಳಿದ ಈ ಸಾಹಿತ್ಯ ಅಂದಿನ ಸಾಂಪ್ರದಾಯಸ್ಥರನ್ನು ಕೆರಳಿಸಿತು. ಕಲ್ಯಾಣದಲ್ಲಿ ಕ್ರಾಂತಿ ಸಂಭವಿಸಿತು. ಶರಣರು ರಾಜಗ್ರಹಕ್ಕೆ ಈಡಾಗಿ ಪ್ರಾಣ ರಕ್ಷಣೆಗಾಗಿ ದಿಕ್ಕುಗೆಟ್ಟು ಓಡುವ ಸ್ಥಿತಿ ನಿರ್ಮಾಣವಾಯಿತು. ಆದರೂ ತಮ್ಮ ಪ್ರಾಣಕ್ಕಿಂತ ಅಮೂಲ್ಯವಾದ ಈ ಸಾಹಿತ್ಯ ರಾಶಿಯನ್ನು ರಕ್ಷಿಸುವಲ್ಲಿ ಅವರೆಲ್ಲ ಪರಮಾವಧಿ ಪರಿಶ್ರಮಿಸಿದರು. ಒಂದು ಗುಂಪು ಆಂದ್ರಪ್ರದೇಶಕ್ಕೆ ಇನ್ನೊಂದು ಗುಂಪು ಕರ್ನಾಟಕದ ವಿಜಯನಗರಕ್ಕೆ ಸಾಗಿ ಬಂದವು.

ವಚನ ಸಾಹಿತ್ಯ ರಚನಾ ಕಾಲದ ನಂತರ ಅವುಗಳ ಸಂಗ್ರಹ ಸಂಕಲನಗಳು ವಿಜಯ ನಗರದ ಪ್ರೌಡ ದೇವರಾಯನ ಅವಧಿಯಲ್ಲಿ ವಿಪುಲ ಪ್ರಮಾಣದಲ್ಲಿ ರೂಪುಗೊಂಡುದು ತಿಳಿದು ಬರುತ್ತದೆ. ಈ ವಚನಗಳನ್ನು ತಾಳೆ ಗರಿಗಳಲ್ಲಿ ಸಂಗ್ರಹಿಸುವ ಸಂಕಲಿಸುವ ಸಂಪಾದಿಸುವ ಕಾರ್ಯ ನಡೆದು ವಚನ ಸಾಹಿತ್ಯದ ರಚನೆಯಷ್ಟೇ ಮುಖ್ಯವಾದ ಈ ಸಂಕಲನ ಹಾಗೂ ಸಂಗ್ರಹಗಳ ಕಾರ್ಯ ನಡೆಯಿತು.

ಈ ರೀತಿ ಸಂಕಲನಗೊಂಡು ತಾಳೆ ಗ್ರಂಥಗಳಲ್ಲಿ ಅಡಕವಾಗಿದ್ದ ವಚನಗಳನ್ನು ಪ್ರಕಟಿಸುವ ಕಾರ್ಯ ೧೯ ಮತ್ತು ೨೦ನೆಯ ಶತಮಾನಗಳಲ್ಲಿ ನಡೆದಿದೆ. ವಚನ ಸಾಹಿತ್ಯ ಪ್ರಕಟಣೆ " ಒಂದು ಐತಿಹಾಸಿಕ ಸಾಧನೆ" ಎನ್ನುವಷ್ಟರಲ್ಲಿ ಮಟ್ಟಿಗೆ ಈ ಕಾರ್ಯ ೧೦೦ ವರ್ಷಗಳವರೆಗೆ ಸಾಗಿ ಬಂದಿದೆ. ಶ್ರೀ ಜಗದ್ಗುರು ತೋಂಟದಾರ್ಯ ಮಠದ ವತಿಯಿಂದ ಒಂದು ವಿಚಾರ ಸಂಕಿರಣವನ್ನು ಹಮ್ಮಿಕೊಳ್ಳುವಷ್ಟರ ಮಟ್ಟಿಗೆ ಇದು ಹಲವು ಘಟ್ಟಗಳಲ್ಲಿ ಹಾಯ್ದು ಬಂದಿದೆ. ಅವುಗಳಲ್ಲಿ ೧. ಪ್ರಾರಂಭದ ಪ್ರಯತ್ನಗಳು, ೨. ವಿಜಾಪೂರದ ಶಿವಾನುಭವ ಗ್ರಂಥಮಾಲೆಯ ಘಟ್ಟ. ೩. ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಘಟ್ಟ ಎಂದು ಗುರುತಿಸುವ ಕಾರ್ಯ ಈ ವರೆಗೆ ನಡೆದಿತ್ತು. ಆ ಮೇಲೆ "ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಮಠದ ಘಟ್ಟ' ಎಂದು ಹೇಳುವಷ್ಟರ ಮಟ್ಟಿಗೆ ವಚನ ಪ್ರಕಟನ ಕಾರ್ಯ ಇಲ್ಲಿ ಅಭೂತಪೂರ್ಣವಾಗಿ ನಡೆದಿದೆ.

ಧಾರವಾಡದ ಕರ್ನಾಟಕದ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠ ಮಾಡುತ್ತಲಿದ್ದ ಈ ವಚನ ಸಾಹಿತ್ಯ ಪ್ರಕಟನ ಕಾರ್ಯ ಕಾರಣಾಂತರಗಳಿಂದ ಸ್ಥಗಿತಗೊಂಡಿತು. ಅನಂತರ ಈ ಕಾರ್ಯವನ್ನು ಯೋಜನಾಬದ್ಧವಾಗಿ ವ್ಯಾಪಕವಾಗಿ ಮುನ್ನಡೆಸಲು ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ ಕಟಿಬದ್ಧವಾಯಿತು. ವಚನ ಸಾಹಿತ್ಯ ಪ್ರಕಟಣೆಯನ್ನು ಧರ್ಮ ಕಾರ್ಯದ ಒಂದು ಮುಖ್ಯ ಕರ್ತವ್ಯವೆಂದು ಭಾವಿಸುವ ಶ್ರೀ ಜಗದ್ಗುರು ಸಿದ್ದಲಿಂಗ ಮಹಾಸ್ವಾಮಿಗಳವರು ಈ ಪ್ರಕಟನೆಯ ಬೆನ್ನೆಲುಬಾಗಿ ಪ್ರಕಟನಾ ಕಾರ್ಯಕ್ಕೆ ಒಂದು ಸಮಗ್ರ ಯೋಜನೆಯನ್ನು ಸಿದ್ಧಗೊಳಿಸಿ ಯಾವ ಯಾವ ವಚನಗಳನ್ನು ಯಾರು ಯಾರು ಸಂಪಾದಿಸಬೇಕು ? ಪ್ರಕಟನೆಯ ಕ್ರಮ ಹೇಗಿರಬೇಕು ? ಅವುಗಳನ್ನು ರೂಪಿಸುತ್ತಿದ್ದವರು ಹಾಗೂ ಕನಸನ್ನು ನನಸಾಗಿಸುತ್ತಿದ್ದವರು ಡಾ. ಕಲಬುರ್ಗಿಯವರು, ಶ್ರೀಮಠದಿಂದ ಈ ಕಾರ್ಯವನ್ನು ಮೂಡಿಸುವಲ್ಲಿ ನಿರ್ದೇಶಕರಾಗಿ ಶ್ರಮಿಸುತ್ತಿದ್ದವರು ಡಾ. ಎಂ.ಎಂ. ಕಲಬುರ್ಗಿ ಅವರು ಅಭಿನಂದನೆಗೆ ಅರ್ಹರು ಇದರಿಂದಾಗಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನಿಂತು ಹೋಗಿದ್ದ ಈ ವಚನ ಸಾಹಿತ್ಯ ಪ್ರಕಟಣೆಗೆ ಶ್ರೀಮಠದಲ್ಲಿ ಚಾಲನೆ ದೊರೆಕಿರುವುದು ಒಂದು ಐತಿಹಾಸಿಕ ಘಟನೆಯೇ ಸರಿ.

ಪ್ರಾರಂಭದಿಂದಲೂ ಶಿಕ್ಷಣ ಸಂಸ್ಥೆಗಳ ಸ್ಥಾಪನೆ ಗ್ರಂಥಗಳ ರಚನೆ ಮತ್ತು ಪ್ರಕಟನೆ ವಿಷಯವಾಗಿ ವೀರಶೈವ ಮಠಗಳು ಗಮನಾರ್ಹ ಕೆಲಸ ಮಾಡುತ್ತಿರುವುದು ಎಲ್ಲರಿಗೂ ತಿಳಿದ ಸಂಗತಿ. ಈ ಪರಂಪರೆಯನ್ನು ಶ್ರೀ ತೋಂಟದಾರ್ಯ ಮಠವು ಪ್ರೌಢ ರೀತಿಯಲ್ಲಿ ಬೆಳೆಸಿಕೊಂಡು ಬಂದಿದೆ. ವೀರಶೈವ ಅಧ್ಯಯನ ಸಂಸ್ಥೆಯನ್ನು ೧೯೭೫ ರಲ್ಲಿ ಸ್ಥಾಪಿಸಿ ಅನೇಕ ಯೋಜನೆಗಳನ್ನು ಹಾಕಿಕೊಂಡು ಇದುವರೆಗೆ ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಲವಾರು ಕೃತಿಗಳನ್ನು ಪ್ರಕಟಿಸಿದೆ. ಸುಮಾರು ಮೂರುವರೆ ಲಕ್ಷ ರೂಪಾಯಿಗಳನ್ನು ವಿನಿಯೋಗಿಸಿ ಆರು ಸಾವಿರ ಪುಟಗಳಷ್ಟು ವಚನ ಸಾಹಿತ್ಯವನ್ನು ಪ್ರಕಟಿಸಿರುವ ಏಕೈಕ ಧಾರ್ಮಿಕ ಏಕೈಕ ಧಾರ್ಮಿಕ ಸಂಸ್ಥೆ ಎಂಬ ಕೀರ್ತಿಗೆ ಇದು ಪಾತ್ರವಾಗಿದೆ.

ಶ್ರೀ ಮಠದಿಂದ ಪ್ರಕಟವಾಗಿರುವ ವಚನ ಸಾಹಿತ್ಯವನ್ನು ವಚನ ಸಂಕಲನಗಳು ಮತ್ತು ಸ್ವರವಚನ ಸಂಕಲನಗಳು ಎಂದು ವರ್ಗೀಕರಿಸಬಹುದು.

ಪ್ರಾಚೀನ ವಚನ ಸಂಕಲನಗಳು ವಿಷಯಕ್ಕನುಗುಣವಾಗಿಯೋ ತತ್ವಕ್ಕನುಗುಣವಾಗಿಯೋ ರೂಪಿಸಿದವುಗಳಾಗಿವೆ. ಇವುಗಳನ್ನು ರೂಪಿಸಿದ ಪ್ರತಿಯೊಬ್ಬರು ಧನ ವಿದ್ವಾಂಸರು ಅನುಭಾವಿಗಳು ಎಂಬುದು ಆಯಾ ವಚನ ಸಂಕಲನವನ್ನು ಗಮನಿಸಿದಾಗ ತಿಳಿಯುತ್ತದೆ. ತಮ್ಮ ಉದ್ದೇಶಕ್ಕೆ ಹೊಂದುವ ವಿವಿಧ ವಚನಗಳನ್ನು ಈ ಸಂಕಲನಕಾರರು ಸೇರಿಸಿದುದು ಮಹತ್ಸಾಧನೆಯೇ ಸರಿ. ಈ ರೀತಿ ಸಂಕಲಿತವಾದ ಅಪ್ರಕಟಿತ ವಚನ ಸಾಹಿತ್ಯವನ್ನು ಪ್ರಕಟಿಸಿ ಜನರಿಗೆ ನೀಡಿರುವ ವೀರಶೈವ ಅಧ್ಯಯನ ಸಂಸ್ಥೆಯೂ ಅಭಿನಂದನಾರ್ಹವಾಗಿದೆ. ಈವರೆಗೆ ಶ್ರೀಮಠದಿಂದ ಪ್ರಕಟಗೊಂಡ ವಚನ ಸಂಕಲನಗಳು ಹಲವಾರು ಅವುಗಳಲ್ಲಿ ೧) ನಿರಾಳ ಮಂತ್ರಗೋಪ್ಯ, ೨) ಚಿತ್ರಯಾ ಸಂಗ್ರಹ, ೩) ಅದ್ವೈತಾನಂದದ ವಚನಗಳು ೪) ಷಟ್‌ಸ್ಥಲಸ್ತೋತ್ರದ ವಚನಗಳು ೫) ಅಷ್ಟಾವರಣಸ್ತೋತ್ರದ ವಚನಗಳು ೬) ಶರಣಸ್ತೋತ್ರದ ವಚನಗಳು, ೭) ಮಿಶ್ರಸ್ತೋತ್ರದ ವಚನಗಳು ೮) ಲಿಂಗ ವಿಕಳಾವಸ್ಥೆಯ ವಚನಗಳು, ೯) ವಚನೈಕೋತ್ತರ ಶತಸ್ಥಲ , ೧೦) ಶೀಲ ಸಂಪಾದನೆ, ೧೧) ಶರಣ ಚಾರಿತ್ರ್ಯದ ವಚನಗಳು, ೧೨) ಷಟ್‌ಸ್ಥಲ ಬ್ರಹ್ಮಾನಂದ ವಿರಕ್ತ ಚಾರಿತ್ರ್ಯ ಸಂಪಾದನೆಯ ವಚನಗಳು, ೧೩)ಭಕ್ತ್ಯಾನಂದ ಸುಧಾರ್ಣವ , ೧೪) ಷಟ್ ಪ್ರಕಾರ ಸಂಗ್ರಹ, ೧೫) ಸೂಕ್ಷ್ಮ ಮಿಶ್ರಷಟ್‌ಸ್ಥಲ, ೧೬) ಸುಖಸಂಪಾದನೆಯ ವಚನಗಳು ೧೭) ಶಿವಯೋಗ ಚಿಂತಾಮಣಿ, ೧೮) ಎಲ್ಲ ಪುರಾತರ ಸ್ತೋತ್ರದ ವಚನಗಳು, ೧೯) ಸಂಪಾದನೆಯ ಸಾರಾಮೃತ , ೨೦) ಶರಣಮುಖ ಮಂಡನ , ೨೧) ಸರ್ವಾಚಾರ ಸಾರಾಮೃತಸುಧೆ , ೨೨) ವಚನಸಾರ, ೨೩) ಅನುಭವಜ್ಞಾನ ಸಾರಾಮೃತ ಸಂಪಾದನೆ ಸ್ತೋತ್ರ ೨೪) ಚೆನ್ನಬಸವರಾಜ ದೇವರ ಷಟ್‌ಸ್ಥಲ ವಚನ , ೨೫) ಚೆನ್ನಬಸವರಾಜ ದೇವರು ನಿರೂಪಿಸಿದ ಅನುಭಾವ ಷಟ್‌ಸ್ಥಲದ ವಚನಗಳು , ೨೬) ಚೆನ್ನಬಸವಣ್ಣನವರ ಷಟ್‌ಸ್ಥಲ ನಿರ್ಣಯ, ೨೭) ಕುಷ್ಟಗಿ ಕರಿಬಸವೇಶ್ವರ ವಚನಗಳು, ೨೮) ಪ್ರಭು ದೇವರ ಷಟ್‌ಸ್ಥಲ ಜಂಗಮಸ್ಥಲ ನಿರ್ದೇಶ, ೨೯) ಬಸವಸ್ತೋತ್ರದ

ವಚನಗಳು, ೩೦)ಗುಮ್ಮಾಳಾಪುರ ಸಿದ್ಧಲಿಂಗದೇವರ ಷಟ್‌ಸ್ಥಲ ಲಿಂಗಾಂಗಸಂಭದ ವಚನಗಳು, ೩೧) ಲಿಂಗಸಾವಧಾನವ ವಚನಗಳು, ೩೨) ಜಂಗಮಸ್ಥಲದ ಆಚರಣೆಯ ನಿರ್ಣಯದ ವಚನಗಳು, ೩೩) ನಿರಾಲಂಬ ಪ್ರಭುದೇವರ ವಚನಗಳು, ೩೪) ನಿರಸನದ ವಚನಗಳು, ೩೫) ಪರಂಜ್ಯೋತಿಯರ ವಚನಗಳು ೩೬) ಕುಸ್ತಿ ಆಗಮದ ವಚನಗಳು ೩ ಚಿದ್ ಭಸ್ಮ ಮಣಿ ಮಂತ್ರ, ಮಹಾತ್ಮೆಯ ಸ್ಥಂದ ವಚನಗಳು ೩೮. ಕಂಡಿತದ ವಚನಗಳು, ೩೯) ನಿಜಗುರು ನಿರಾಲಂಭ ಪ್ರಭುವ ಅಂಕಿತದ ವಚನಗಳು, ೪೦) 'ನಂಜುಂಡ ಶಿವಾ' ಅಂಕಿತದ ವಚನಗಳು, ೪೧) ಗುಹೇಶ್ವರಪ್ರಿಯ ನಿರಾಳಲಿಂಗ ಅಂಕಿತದ ವಚನಗಳು , ೪೨) ಕಿತ್ತೂರ ಮಹತ್ತದೇವರ ಎಲ್ಲ ಪುರಾತನರ ವಚನಗಳು, ೪೨) ಸರ್ವಾಂಗಲಿಂಗಸ್ಥಲದ ವಚನಗಳು, ೪೪) ಇನ್ನಾರಿಪ್ಪತ್ತೈದು ಸಕೀಲದ ವಚನ , ೪೫) ಚೆನ್ನಬಸವೇಶ್ವರ ದೇವರ ರಾಜಯೋಗದ ವಚನ.

ಇವುಗಳಲ್ಲಿ ಬಹಳಷ್ಟು ಸಂಕಲನಗಳ ಹೆಸರೂ ನಮಗೆ ಗೊತ್ತಿರಲಿಲ್ಲ ವಿಶ್ವವಿದ್ಯಾಲಯಗಳಲ್ಲಿ ವೀರಶೈವಗಳಲ್ಲಿ ಸಾರ್ವಜನಿಕ ಸಂಸ್ಥೆಗಳಲ್ಲಿ ವಿದ್ವಾಂಸ ವ್ಯಕ್ತಿಗಳಲ್ಲಿ ಅಡಗಿ ಕುಳಿತಿದ್ದ ಇವುಗಳನ್ನು ಪತ್ತೆ ಹಚ್ಚಿರುವುದೇ ಒಂದು ದೊಡ್ಡ ಸಾಹಸ ಹೀಗೆ ಹಚ್ಚಿ ಯಾವ ಸಂಕಲನವನ್ನು ಯಾವ ವಿದ್ವಾಂಸರು ಪರಿಷ್ಕರಿಸಬಹುದು ಎಂದು ತೂಗಿ ನೋಡಿ ಅವರಿಂದ ಸಕಾಲದಲ್ಲಿ ಕೆಲಸ ಮಾಡಿಸಿ ಈ ಯೋಜನೆಯನ್ನು ನಿಲ್ಲದಂತೆ ನಡೆಸಿಕೊಂಡು ಬಂದುದೇ ಒಂದು ಪವಾಡ.

ಈ ಮಾಲೆಯ ಅಡಿಯಲ್ಲಿ ವಚನ ಮತ್ತು ಸ್ವರಚನಗಳೆರಡನ್ನು ಆಯ್ದುಕೊಂಡುದು ಪ್ರಮುಖ ವಚನ ಸಂಕಲನಗಳನ್ನು ಸ್ವತಂತ್ರವಾಗಿ ಲಘು ವಚನ ಸಂಕಲನಗಳನ್ನು ಸಂಯುಕ್ತ ಸಂಪುಟವಾಗಿ ಪ್ರಕಟಿಸುತ್ತಿರುವುದು ಪ್ರಸ್ತುತ ಯೋಜನೆಯ ಕ್ರಮಬದ್ಧತೆಯನ್ನು ಸೂಚಿಸುತ್ತದೆ. ಈ ಎಲ್ಲಾ ಕೃತಿಗಳನ್ನು ಹೊರ ತರುವಲ್ಲಿ ಅವುಗಳ ಮುಖಪುಟ ವಿನ್ಯಾಸ ಸಂಪಾದನಾ ಕ್ರಮ ಮುದ್ರಣಗಳಲ್ಲಿಯ ಮುತುವರ್ಜಿ ನಿಜಕ್ಕೂ ಮೆಚ್ಚುವಂತಹದು ಇವೆಲ್ಲ ವಿಶ್ವವಿದ್ಯಾಲಯದಂಥ ಸಂಸ್ಥೆಗಳ ಯೋಜನಾ ಬದ್ಧ ಕಾರ್ಯವನ್ನು ನೆನಪಿಸುತ್ತವೆ.

ನೀರಾಳ ಮಂತ್ರಗೋಪ್ಯ ಕುಷ್ಟಗಿ ಕರಿಬಸವೇಶ್ವರ ವಚನ ಷಟ್‌ಸ್ಥಲ ಲಿಂಗಾಂಗ ಸಂಬಂದದ ನಿರ್ವಚನಗಳಂಥ ಏಕ ವ್ಯಕ್ತಿ ವಿರಚಿತ ಪಾರಚೀನ ವಚನ ಸಂಕಲನಗಳು ಬಹಳಷ್ಟು ಅನೇಕ ವ್ಯಕ್ತಿ ವಿರಚಿತ ವಚನ ಸಂಕಲನಗಳೇ ಆಗಿವೆ. ಸ್ತೋತ್ರದ ವಚನಗಳ ದೊಡ್ಡ ಕೃತಿಗಳ ಸಂಗ್ರಹ ರೂಪಗಳು. ಟೀಕೆಗಳು ಎಂದು ಮುಂತಾಗಿಯೂ ಹೆಸರಿಸಬಹುದಾಗಿದೆ. ಷಟ್ ಪ್ರಕಾರ ಸಂಗ್ರಹ ಶಿವಯೋಗ ಚಿಂತಾಮಣಿಯಂಥ ದೊಡ್ಡ ಸಂಕಲನಗಳನ್ನು ಪ್ರಕಟಿಸಿದ ಈ ಸಂಸ್ಥೆ 'ನಂಜುಂಡ ಶಿವ ಅಂಕಿತದ ವಚನಗಳು ಎಂಬಂಥ ಬಿಡಿ ವಚನಗಳನ್ನು ಬಿಡದಿರುವುದು ಸಮಗ್ರ ದೃಷ್ಟಿಯ ದ್ಯೋತಕವೆನಿಸಿದೆ. ಷಟ್‌ಸ್ಥಲದ ಮೂರು ಕ್ರಮಗಳನ್ನು ಪ್ರತಿನಿಧಿಸುವ ಚೆನ್ನಬಸವಣ್ಣನವರ ಷಟ್‌ಸ್ಥಲ ವಚನ ಸಂಕಲನಗಳ

ಶೋಧ ಅವುಗಳ ಸಂಯುಕ್ತ ಸಂಪುಟದ ಪ್ರಕಟನೆ. ಎಳಮಲೆ ಗುರುಶಾಂತ ದೇವರ ಸಮಗ್ರ ಕೃತಿ ಸಂಪುಟದ ಪ್ರಕಟನೆ ಈ ಯೋಜನೆಯ ಹೊಸ ಹೊಸ ಹೂಳಹುಗಳಿಗೆ ನಿದರ್ಶನವೆನಿಸಿದೆ.

ವಚನ ಸಾಹಿತ್ಯದಂತೆಯೇ ಸ್ವರವಚನ ಸಾಹಿತ್ಯವೂ ಪ್ರಮುಖವಾದು ವಚನ ಸಾಹಿತ್ಯ ಸಾಮಾಜಿಕ, ಅನುಭಾವಿಕ ಮತ್ತು ತಾತ್ವಿಕ ವಿಚಾರಗಳನ್ನು ವಿಶದಪಡಿಸಿದರೆ ಸ್ವರವಚನ ಸಾಹಿತ್ಯ ಇನ್ನೂ ಮುಂದೆ ಹೋಗಿ ವಚನಗಳಿಗೆ ಸಂಗೀತದ ಮೃದು ಮಧುರ ಆಯಾಮವನ್ನು ಒದಗಿಸಿವೆ. ಕೇಳುವ ಕಿವಿಗಳಿಗೆ ಇಂಪನ್ನು ಒದಗಿಸಿದ ಕೀರ್ತಿ ಈ ಪ್ರಕಾರಕ್ಕೆ ಸಲ್ಲುತ್ತದೆ. ಡಾ. ಎಲ್. ಬಸವರಾಜು ಅವರು ಶಿವದಾಸ ಗೀತಾಂಜಲಿಯನ್ನು ಪ್ರಕಟಿಸಿದಾಗಲೇ ಈ ಪ್ರಕಾರದ ವಿಷಯವಾಗಿ ಬೆರಗಾಗಿದ್ದ ನಾವು. ತೋಂಟದಾರ್ಯಮಠದ ಸ್ವರ ವಚನಗಳ ಪ್ರಕಟನೆ ಪರಂಪರೆಯಿಂದ ನಿಬ್ಬೆರಗಾಗಿದ್ದೇವೆ. ಇವೆಲ್ಲ ಎಲ್ಲಿ ಇದ್ದವು ? ಇಷ್ಟು ದಿನ ಉಪೇಕ್ಷಿಸಿದ ನಮ್ಮ ಕರ್ತವ್ಯಲುಪ್ತತೆಗೆ ಕಾರಣವೇನು ? ಎಂದು ನಾವೇ ಪ್ರಶ್ನೆ ಹಾಕಿಕೊಳ್ಳುವಂತಾಗಿದೆ. 'ಸ್ವರ ವಚನ ಎಂಬ ಹೆಸರನ್ನು ಪ್ರಚುರಗೊಳಿಸಿದ ಕೀರ್ತಿಯಂತೂ ಖಂಡಿತವಾಗಿ ಈ ಸಮಸ್ಥೆಗೆ ಸಲ್ಲುತ್ತದೆ. ಈ ಹಿನ್ನಲೆಯಲ್ಲಿ ಹತ್ತು ಸ್ವರವಚನ ಕೃತಿಗಳನ್ನು ಈ ಸಂಸ್ಥೆ ಹೊರ ತಂದಿದೆ. ಅವು ೧. ಕಡಗೋಳ ಮಡಿವಾಳೇಶ್ವರ ವಿರಚಿತ ಸ್ವರ ವಚನಗಳು, ೨) ಕೆಸ್ತೂರ ದೇವರ ಸ್ವರವಚನಗಳು ೩) ಡಂಗುರ ಪದಗಳು, ೪) ಕೂಡಲೂರ ಬಸವಲಿಂಗ ಶರಣರ ಸ್ವರ ವಚನಗಳು, ೫) ಜೆಗುನಿ ಮರುಳ ದೇವರ ಸ್ವರವಚನಗಳು, ೬) ಕಂಬಾಳ ಶಾಂತ ಮಲ್ಲೇಶನ ಗಣವಚನ ರತ್ನಾವಳಿ ೭) ಗುರುಬಸವಾರ್ಯಾನ ಸ್ವರವಚನಗಳು ೮) ಹಾಗಲವಾಡಿ ಮುದ್ದೀರಸ್ವಾಮಿಯ ಸ್ವರವಚನಗಳು ೯) ಶಂಕರ ದೇವರ ಸ್ವರವಚನಗಳು ೧೦) ಮರಿಶಾಂತ ಬಸದೇವನ ಸ್ವರವಚನಗಳು.

ಇವು ೧೨ನೆಯ ಶತಮಾನದಿಂದ ಹಿಡಿದು ೧೯ನೇಯ ಶತಮಾನದವರೆಗಿನ ಅವಧಿಯಲ್ಲಿ ಹುಟ್ಟಿದ ಸ್ವರವಚನ ಸಂಕಲನಗಳಾಗಿವೆ. ಜೇಡರ ದಾಸಿಮಯ್ಯ ಬಸವಣ್ಣ ಮಹಾದೇವಿಯಕ್ಕ ಮೊದಲು ಮಾಡಿ ಹದಿನೈದನೆಯ ಶತಮಾನದಿಂದೀಚೆಯ ಕೆಸ್ತೂರದೇವ, ಬೆಗುನಿಯ ಮರುಳು ದೇವ, ಶಂಕದೇವ, ಮರಿಶಾಂತ ಬಸವದೇವರನ್ನು ಒಳಗೊಂಡು ಕಡಕೋಳ ಮಡಿವಾಳಪ್ಪ, ಕೂಡಲೂರ ಬಸವಲಿಂಗ ಶರಣರವರೆಗೆ ಈ ಸಾಹಿತ್ಯ ಮೈಚಾಚಿದೆ. ಏಕ ವ್ಯಕ್ತಿಕೃತ ಸ್ವರವಚನ ಸಂಪುಟಗಳೂ ಇಲ್ಲಿವೆ. ಅನೇಕ ವ್ಯಕ್ತಿ ಕೃತಿ ಸ್ವರವಚನ ಸಂಕಲನಗಳೂ ಇಲ್ಲಿವೆ. ಶುದ್ದ ತಾತ್ವಿಕ ಪದಗಳು ನೀತಿ ಬೋಧೆಯ ಹಾಡುಗಳು ಇಲ್ಲಿದ್ದು ಮರಿಶಾಂತ ಬಸದೇವನ ಸ್ವರವಚನಗಳಲ್ಲಿ ಐತಿಹಾಸಿಕ ಸಂಗತಿಗಳು ನಿಕ್ಷಿಪ್ತವಾಗಿರುವುದು ವಿಶಿಷ್ಟವೆನಿಸಿದೆ. ಇವುಗಳಲ್ಲಿ ಕೆಲವು ಪ್ರಾಚೀನ ಹಸ್ತ ಪ್ರತಿಯಿಂದ ಸಂಗ್ರಹಿಸಿದವು ಕಡಕೋಳ ಮಡಿವಾಳಪ್ಪ ಕೂಡಲೂರು ಬಸವಲಿಂಗ ಶರಣರ ಹಾಡುಗಳು ವಿಶೇಷವಾಗಿ ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದವು. ಈ ಶ್ರಮವನ್ನು ನೆನಪಿಸಿಕೊಂಡರೆ ಈ ಸಂಸ್ಥೆಯ ಧನ್ಯತೆ ಅರ್ಥವಾಗುತ್ತದೆ.

ಡಂಕುರ ಪದಗಳು ಸ್ವರ ವಚನ ಪ್ರಕಾರದಲ್ಲಿ ಒಂದು ಒಳ ಪ್ರಭೇದ ಈ ಪ್ರಕಾರದ ಪದಗಳನ್ನು ಶಿವಪೂಜಾ ಕಾರ್ಯ ಮುಗಿದ ಬಳಿಕ ಹಾಡುವ ಸಂಪ್ರದಾಯ ಅಸ್ತಿತ್ವದಲ್ಲಿವೆ. ಈ ಹಾಡುಗಳನ್ನು ಮೂರು ನಾಲ್ಕು ಜನ ವ್ಯಕ್ತಿಗಳು ಲಯಬದ್ಧವಾಗಿ ಹಾಡತ್ತಿದ್ದರೆಂದು ತಿಳಿದು ಬರುತ್ತದೆ. ಈ ಪ್ರಕಾರವನ್ನು ಬೆನ್ನಿಟ್ಟ ಶೋಧಿಸಿ ಪ್ರಕಟವಾಗುವಂತೆ ನೋಡಿಕೊಂಡ ಶ್ರಮ ಮೆಚ್ಚುವಂತಹುದು ಕವಿ ಚರಿತೆಕಾರರ ಕಣ್ಣಿಗೆ ಬಿದ್ದು ತಪ್ಪಿಸಿಕೊಂಡಿದ್ದ 'ಗುಣವಚನ ರತ್ನಾವಳಿ'ಯನ್ನು ಪ್ರಕಟಿಸಿದುದು ಹಸ್ತ ಪ್ರತಿ ಕ್ಷೇತ್ರದ ಒಂದು ದೊಡ್ಡ ಶೋಧವೆಂಬುದು ಆ ಕ್ಷೇತ್ರದ ವಿದ್ವಾಂಸರಿಗೆಲ್ಲ ಗೊತ್ತು ಒಟ್ಟಿನಲ್ಲಿ ಸ್ವರವಚನ ಪ್ರಕಟನೆಯ ಇತಿಹಾಸದಲ್ಲಿಯಂತೂ ಈ ಸಂಸ್ಥೆ ಒಂದು ಹೊಸ ಘಟ್ಟವನ್ನೇ ದಾರಿಯನ್ನೇ ತೆರೆಯುತ್ತ ನಡೆದಿದೆ.

ಈ ಎಲ್ಲ ಕಾರಣಗಳಿಂದಾಗಿ ವಚನ ಸಾಹಿತ್ಯ ಪ್ರಕಟನೆಯ ನಾಲ್ಕನೆಯ ಘಟ್ಟದ ನಾಯಕಪಟ್ಟ ವೀರಶೈವ ಅಧ್ಯಯನ ಸಂಸ್ಥೆಗೆ ಖಂಡಿತ ಸಲುತ್ತದೆ. ಈ ಯೋಜನೆಯಲ್ಲಿ ಕೃತಿಗಳನ್ನು ಸಂಪಾದಿಸಿಕೊಟ್ಟ ಶ್ರೀ ಜಿ.ಎ. ಶಿವಲಿಂಗಯ್ಯ (ಮೈಸೂರು) ಎಸ್. ಉಮಾಪತಿ (ಡಾವಣಗೆರೆ) ಎಸ್. ಶಿವಣ್ಣ (ಬೆಂಗಳೂರು) ವಿ.ಬಿ. ರಾಜೂರ (ಧಾರವಾಡ) ಬಿ.ಆರ್. ಹಿರೇಮಠ (ಧಾರವಾಡ) ಬಿ.ವಿ. ಶಿರೂರು (ಧಾರವಾಡ) ಬಿ.ಆರ್. ಹೂಗಾರ (ಧಾರವಾಡ) ಡಾ. ಉಮಾದೇವಿ (ಹುಬ್ಬಳ್ಳಿ) ಡಾ. ಎಂ. ಎಂ. ಕಲಬುರ್ಗಿ(ಧಾರವಾಡ) ಇವರ ಅಭಿನಂದನಾರ್ಹರೆನಿಸಿದ್ದಾರೆ.



ಈ ಯೋಜನೆಯ ಹಿಂದೆ ನಿಂತು ಸಹಾಯ ಸಹಕಾರ ಮಾಡುತ್ತಿರುವ ಡಾ. ವಿ.ಬಿ. ರಾಜೂರ ಡಾ. ಬಿ.ಆರ್. ಹಿರೇಮಠ, ಶ್ರೀ ಎಸ್. ಶಿವಣ್ಣನವರೂ ಅಭಿನಂದನಾರ್ಹವೆನಿಸಿದ್ದಾರೆ. ಇನ್ನೂ ನಾಲ್ಕಾರು ಕೃತಿಗಳನ್ನು ಬೆಳಕಿಗೆ ತಂದು ನೂರಾರು ವರ್ಷಗಳಿಂದ ನಡೆದು ಈ ಕಾರ್ಯಕ್ಕೆ ವಿರಾಮ ಚಿಹ್ನೆ ನೀಡಲಿರುವ ವೀರಶೈವ ಅಧ್ಯಯನ ಸಂಸ್ಥೆ, ವಚನ ಸಾಹಿತ್ಯ ಪ್ರಕಟನೆಯ ಇತಿಹಾಸದಲ್ಲಿಯ ಐತಿಹಾಸಿಕ ಸ್ಥಾನ ಪಡೆಯಲಿರುವುದು ಪ್ರಶ್ನಾತೀತವಾಗಿದೆ.

ಧಾರವಾಡದ ಶ್ರೀ ಮುರಘಾಮಠದ ಪ್ರಧಾನವಾಗಿ ಕಾವ್ಯ ಪುರಾಣಗಳನ್ನು ಪ್ರಕಟಿಸಿದ್ದರೂ ಆಗಾಗ ವಚನ ಸಂಕಲನಗಳಿಗೂ ಗಮನಕೊಟ್ಟಿದೆ. ನಾಲ್ಕನೆಯ ಘಟ್ಟದ ಅವಧಿಯಲ್ಲಿ ಅದು ಪ್ರಕಟಿಸಿದ ಮುಖ್ಯ ಕೃತಿಯೆಂದರೆ ಬಸವಣ್ಣನವರ ವಚನ ಸಂಪುಟ ಇದಲ್ಲದೆ ಮುರ್‍ನಾಲ್ಕು ಸಣ್ಣ ಪುಟ್ಟ ಸಂಕಲಗಳನ್ನು ಅದು ಬೆಳಕಿಗೆ ತಂದಿದೆ. ಹುಬ್ಬಳ್ಳಿಯ ಮೂರುಸಾವಿರಮಠದ ಅನೇಕ ಪುಸ್ತಕಗಳನ್ನು ಪ್ರಕಟಿಸುವುದರೊಂದಿಗೆ ಇತ್ತೀಚೆಗೆ ಪ್ರತಿಯೊಬ್ಬ ಶರಣರ ನೂರಾರು ವಚನಗಳನ್ನೊಳಗೊಂಡ ೨೫ ಶರಣರ ವಚನ ಸಂಗ್ರಹಗಳನ್ನು ಪ್ರಕಟಿಸಿದೆ. ಬೆಂಗಳೂರಿನ ಬಸವ ಸಮಿತಿ ಬಸವ ವಚನಾಮೃತ ಇತ್ಯಾದಿ ಕೃತಿಗಳನ್ನು ಹೊರತಂದಿದೆ.

ಮೈಸೂರಿನ ಶರಣ ಸಂತಾನ ಪತ್ರಿಕೆಯ ಸಂಪಾದಕರಾದ ಶ್ರೀ ಪಿ.ಎಂ. ಗಿರಿರಾಜ ಅವರು ಪ್ರಾಚೀನ ವಚನ ಸಂಕಲನಗಳನ್ನು ಸಾಮಾನ್ಯವಾಗಿ ತಮ್ಮ ಪತ್ರಿಕೆಯ ಮೂಲಕ ಭಾಗಶಃ ಪ್ರಕಟಿಸಿ ಆ ಮೇಲೆ ಸ್ವತಂತ್ರ ಕೃತಿ ರೂಪದಲ್ಲಿ ಹೊರತರುತ್ತಲಿದ್ದಾರೆ. ಈಗಾಗಲೇ ಪ್ರಕಟವಾಗಿರುವ ಕೆಲವನ್ನು ಬಿಟ್ಟರೆ ಅಪ್ರಕಟಿತ ಕೃತಿಗಳ ಸಂಖ್ಯೆಯೇ ಇಲ್ಲಿ ಅಧಿಕವಾಗಿವೆ. ಸಂಪಾದನೆಯ ಚೆನ್ನ ನಂಜಯದೇವರು ಸೇರಿಸಿದ ಆಚರಣೆ ಸಂಬಂಧ ವಚನಗಳು, ಶಂಕರದೇವರು ಸೇರಿಸಿದ ವಿರತಾಚರಣೆಯ ಶರಣ ಸಂಬಂದದ ವಚನಗಳು ಸಂಪಾದನೆಯ ಸಿದ್ದ ವಿರೇಶ್ವರವರು ಸೇರಿಸಿದ ಆಚರಣೆ ಸಂಬಂಧ ವಚನಗಳು, ಶಾಂತದೇವರು ಸೇರಿಸಿದ ಷಟ್ಪ್ರಕಾರ ಸಂಗ್ರಹ ಇತ್ಯಾದಿ ಸಂಕಲನಗಳು ಗಮನಾರ್ಹವೆನಿಸಿವೆ.

# ಅಧ್ಯಾಯ–ನಾಲ್ಕು

## ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆ

* ವಚನ ಸಂಪಾದನೆಯ ಕೃತಿಗಳು
* ಬಸವಸ್ತೋತ್ರದ ವಚನಗಳು
* ಬಸವಣ್ಣನವರ ಟೀಕಿನ ವಚನಗಳು ಸಂಪುಟ 1
* ಚನ್ನಬಸವಣ್ಣನವರ ಷಟಸ್ಥಲ ವಚನ ಮಹಾಸಂಪುಟ
* ವಚನ ಶಾಸ್ತ್ರಸಾರ
* ಬಸವಣ್ಣನವರ ವಚನ ಸಂಪುಟ
* ಸಂಕೀಣ ವಚನ ಸಂಪುಟ
* ಏಕೋತ್ತರ ಶತಸ್ಥಲ
* ವಚನ

## ಅಧ್ಯಾಯ : ನಾಲ್ಕು

# ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆ

ಡಾ. ಎಂ.ಎಂ. ಕಲಬುರ್ಗಿಯವರು ಕೈಗೊಂಡ ಬಹು ವಿಧ ಸಾಹಿತ್ಯ ಸಂಪಾದನಾ ಕಾರ್ಯಗಳಲ್ಲಿ ಅವರಿಗೆ ಅತ್ಯಂತ ಪ್ರೀತಿಯ ಮತ್ತು ಅಚ್ಚು ಮೆಚ್ಚಿನ ಕೆಲಸವೆಂದರೆ "ವಚನ ಸಂಪಾದನೆ" ಅವರ ಜೀವನ ಪಥದ ೭೭ ವರ್ಷಗಳಲ್ಲಿ ೨೪ ವರ್ಷಗಳನ್ನು ವಿದ್ಯಾಭ್ಯಾಸಕ್ಕಾಗಿ ಮೀಸಲಾಗಿಸಿದರೆ ಉಳಿದ ೫೩ ವರ್ಷಗಳನ್ನು ಬೋಧನೆ, ಸಂಶೋಧನೆ ಪ್ರಕಟಣೆ ಬರವಣಿಗೆಗಾಗಿ ಮೀಸಲಾಗಿಟ್ಟಿದ್ದಾರೆ.

ಡಾ. ಎಂ.ಎಂ. ಕಲಬುರ್ಗಿಯವರು ವಚನ ಸಾಹಿತ್ಯದ ಸಂಪಾದನೆಗೆ ಸಂಬಂಧಿಸಿದಂತೆ ಅವರ ಸಂಶೋಧನೆ ಪ್ರಾರಂಭಗೊಂಡಿದ್ದು ೧೯೬೨ ರಿಂದ. ತಮ್ಮ ಎಂ.ಎ. ಪದವಿಯನ್ನು ಪಡೆದ ನಂತರ ಡಾ. ಆರ್.ಸಿ. ಹಿರೇಮಠ ಅವರ ಪ್ರಧಾನ ಸಂಪಾದಕತ್ವದಲ್ಲಿ ರೂಪಿತವಾದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಆರಂಭವಾಗಿದ್ದ "ಸಮಗ್ರ ವಚನ ವಾಙ್ಮಯ ಸಂಶೋಧನ ಸಂಸ್ಕರಣ ಪ್ರಕಟಣ ಯೋಜನೆ" ಯಲ್ಲಿ ಸಹಾಯಕ ಸಂಶೋಧಕರಾಗಿ ಸೇರಿಕೊಂಡರು. ಅಲ್ಲಿ ಒಂದು ವರ್ಷ ಕಾಲ ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಸ್ತ ಪ್ರತಿಗಳ ಸಂಗ್ರಹ, ಸೂಚೀಕರಣ ವಚನಗಳ ನಕಲು , ಪರಿಷ್ಕರಣ ಇತ್ಯಾದಿ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಈ ಯೋಜನೆಯ ಮೊದಲು ಕೃತಿ ೧೯೬೫ ರಲ್ಲಿ "ಚನ್ನಬಸವಣ್ಣನವರ ವಚನಗಳು" ಸಮಗ್ರ ಸಂಪುಟ ಪ್ರಕಟವಾಗುವಲ್ಲಿ ಅತ್ಯಂತ ನಿಷ್ಠೆಯಿಂದ ದುಡಿದರು. ಅನಂತರ ಅವರು ಕರ್ನಾಟಕ ಕಾಲೇಜಿಗೆ ಅಧ್ಯಾಪಕರಾಗಿ ಹೋದ ನಿಮಿತ್ತ ತಮ್ಮ ಅಧ್ಯಯನ ಅಧ್ಯಾಪನಗಳಲ್ಲಿ ನಿರತರಾದರು. ಆ ಮೇಲೆ ವಿಶ್ವವಿದ್ಯಾಲಯಕ್ಕೆ ೧೯೬೬ರಲ್ಲಿ ಅಧ್ಯಾಪಕರಾಗಿ ಬಂದರು.

೧೯೮೦ ರಲ್ಲಿ ಡಾ. ಎಂ.ಎಂ. ಕಲಬುರ್ಗಿಯವರು ಶ್ರೀ ಬಸವೇಶ್ವರ ಪೀಠದ ಪ್ರಾಧ್ಯಾಪಕರಾದ ನಂತರ ಅಲ್ಲಿಂದ ತಮ್ಮ ಜೀವಿತ ಅವಧಿಯ ಕೊನೆಯುವರೆಗೂ ವಚನ ಸಾಹಿತ್ಯ ಸಂಶೋಧನೆ ಪರಿಷ್ಕರಣೆ, ಪ್ರಕಟಣೆ ಮತ್ತು ಪ್ರಸಾರ ಕಾರ್ಯವನ್ನು ತಮ್ಮ ಬದುಕಿನ ಬಹು ಮುಖ್ಯ ಕಾಯಕವನ್ನಾಗಿ ಮಾಡಿಕೊಂಡರು. ಡಾ. ಕಲಬುರ್ಗಿ ಅವರು ರಚಿಸಿದ ಒಟ್ಟು ೧೨೦ ಕೃತಿಗಳಲ್ಲಿ ೩೦ ಕೃತಿಗಳು , ಒಟ್ಟು ೭೫೪ ಲೇಖನಗಳಲ್ಲಿ ೨೨೮ ಲೇಖನಗಳು ವಚನ ಸಾಹಿತ್ಯಕ್ಕೆ ಸಂಬಂಧಪಟ್ಟವುಗಳಾಗಿವೆ. ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆಗೆ ಸಂಬಂಧಿಸಿದಂತೆ ೧೯೭೬ ರಲ್ಲಿ ಪ್ರಕಟವಾದ ಬಸವ ಸ್ತೋತ್ರದ ವಚನಗಳು ಅವರ ವಚನ ಸಂಪಾದನೆಯ ಮೊದಲ ಕೃತಿಯಾಗಿದೆ.

ವಚನ ಸಾಹಿತ್ಯ ಕುರಿತು ಡಾ. ಎಂ.ಎಂ. ಕಲಬುರ್ಗಿಯವರು ಅವರು ಸಂಪಾದಿಸಿದ ಕೃತಿಗಳು.

೧. ಬಸವ ಸ್ತೋತ್ರದ ವಚನಗಳು –೧೯೭೬

೨. ಬಸವಣ್ಣನವರ ಟೀಕಿನ ವಚನಗಳು ಸಂ. ೧ : ೨ –೧೯೭೮

ಬಸವಣ್ಣನವರ ಟೀಕಿನ ವಚನಗಳು ಸಂ . : ೩ , ೧೯೮೨

೩. ಚನ್ನಬಸವಣ್ಣನವರ ಷಟಸ್ಥಲ ವಚನ ಮಹಾ ಸಂಪುಟ –೧೯೯೨

೪. ವಚನಶಾಸ್ತ್ರ ಸಾರ

೫. ಬಸವಣ್ಣನವರ ವಚನ ಸಂಪುಟ – ೧೯೯೩

೬. ಸಮಗ್ರ ವಚನ ಸಂಪುಟ –೬

೭. ಏಕೋತ್ತರಶತಸ್ಥಲ

## ಸಮಗ್ರ ವಚನ ಸಾಹಿತ್ಯದ ಜನಪ್ರೀಯ ಆವೃತ್ತಿ ಪ್ರಕಟಣೆಯ ಯೋಜನೆ

ಡಾ. ಎಂ.ಎಂ. ಕಲಬುರ್ಗಿಯವರ ಸಂಪಾದಕತ್ವದಲ್ಲಿ ಡಾ. ಎಂ. ಚಿದಾನಂದಮೂರ್ತಿ, ಡಾ. ಸಿ.ಪಿ. ಕೃಷ್ಣಕುಮಾರ, ಡಾ. ಎಸ್. ವಿದ್ಯಾಶಂಕರ ಹಾಗೂ ಕನ್ನಡ ಸಂಸ್ಕೃತಿಯ ಆಯುಕ್ತರನ್ನು ಒಳಗೊಂಡ ಸಲಹಾ ಮಂಡಳಿಯೊಂದಿಗೆ ಸಮಗ್ರ ವಚನ ಸಾಹಿತ್ಯದ ಜನಪ್ರೇಯ ಆವೃತ್ತಿ ಪ್ರಕಟಣೆ ಯೋಜನೆಯು ಪ್ರಾರಂಭಗೊಂಡು ೧೯೯೩ ರಲ್ಲಿ ನಾಡಿನ ಹಿರಿಯ ವಿದ್ವಾಂಸರನ್ನು ವಚನ ಸಂಪಾದನೆಗೆ ಒಳಪಡಿಸಿಕೊಂಡು ೧೫ ವಚನ ಸಂಪುಟಗಳು ಪ್ರಕಟಣೆಗೊಂಡು ನಾಡ ಜನರಿಗೆ ಮುಟ್ಟಿಸುವಲ್ಲಿ ಡಾ. ಕಲಬುರ್ಗಿಯವರ ಪ್ರಯತ್ನ ದಾಖಲಾರ್ಹವಾದುದು.

| ಸಂಪುಟಗಳು | | ಸಂಪಾದಕರು |
|---|---|---|
| ೧ ಬಸವಣ್ಣನವರ ವಚನ ಸಂಪುಟ | – | ಡಾ. ಎಂ. ಎಂ. ಕಲಬುರ್ಗಿ |
| ೨ ಅಲ್ಲಮಪ್ರಭು ದೇವರ ವಚನ ಸಂಪುಟ | – | ಡಾ. ಬಿ.ವ್ಹಿ. ಮಲ್ಲಾಪೂರ |
| ೩ ಚನ್ನಬಸವಣ್ಣನವರ ವಚನ ಸಂಪುಟ | – | ಡಾ. ಬಿ.ವ್ಹಿ. ಮಲ್ಲಾಪೂರ |
| ೪ ಸಿದ್ದರಾಮೇಶ್ವರ ವಚನ ಸಂಪುಟ | – | ಡಾ. ಎಸ್.ವಿದ್ಯಾಶಂಕರ |
| ೫ ಶಿವಶರಣೆಯರ ವಚನ ಸಂಪುಟ | – | ಡಾ. ವೀರಣ್ಣ ರಾಜೂರ |
| ೬ ಸಂಕೀರ್ಣ ವಚನ ಸಂಪುಟ–೧ | – | ಡಾ. ಎಂ.ಎಂ. ಕಲಬುರ್ಗಿ |
| ೭ ಸಂಕೀರ್ಣ ವಚನ ಸಂಪುಟ–೨ | – | ಡಾ. ಎಸ್. ವಿದ್ಯಾಶಂಕರ |
| ೮ ಸಂಕೀರ್ಣ ವಚನ ಸಂಪುಟ–೩ | – | ಡಾ. ಬಿ.ಆರ್. ಹಿರೇಮಠ |
| ೯ ಸಂಕೀರ್ಣ ವಚನ ಸಂಪುಟ–೪ | – | ಡಾ. ಬಿ.ಆರ್. ಹಿರೇಮಠ |
| ೧೦ ಸಂಕೀರ್ಣ ವಚನ ಸಂಪುಟ–೫ | – | ಡಾ. ವೀರಣ್ಣ ರಾಜೂರ |
| ೧೧ ಸಂಕೀರ್ಣ ವಚನ ಸಂಪುಟ–೬ | – | ಎಸ್. ಶಿವಣ್ಣ |
| ೧೨ ಸಂಕೀರ್ಣ ವಚನ ಸಂಪುಟ–೭ | – | ಡಾ. ವೀರಣ್ಣ ರಾಜೂರ |
| ೧೩ ಸಂಕೀರ್ಣ ವಚನ ಸಂಪುಟ–೮ | – | ಡಾ. ವೀರಣ್ಣ ರಾಜೂರ |
| ೧೪ ಸಂಕೀರ್ಣ ವಚನ ಸಂಪುಟ–೯ | – | ಡಾ. ವೀರಣ್ಣ ರಾಜೂರ |
| ೧೫ ವಚನ ಪರಿಭಾಷಾ ಕೋಶ | – | ಡಾ. ಎಸ್. ವಿದ್ಯಾಶಂಕರ |

## ಬಸವಸ್ತೋತ್ರದ ವಚನಗಳು – ೧೯೭೬ :

ಡಾ. ಎಂ.ಎಂ. ಕಲಬುರ್ಗಿ ಅವರ ಈ ವಚನ ಸಂಪಾದನೆಯಲ್ಲಿ ಪ್ರಾಚೀನ ವಚನ ಸಂಕಲನಕಾರರಾದ ಹರತಾಳ ಚೆನ್ನಂಜೇದೇವ ಮತ್ತು ಸಂಪಾದನೆಯ ಬೋಳಬಸವರು ಸಂಕಲನದ ಮೂರು ಕೃತಿಗಳನ್ನು ಒಟ್ಟಾಗಿ ಪರಿಷ್ಕರಿಸಿ ಕೊಡಲಾಗಿದೆ. ಈ ಮೊದಲು ತಾವು ಬೇರೆಯವರಿಂದ ಸಂಪಾದಿತವಾಗಿ ಪ್ರಕಟವಾಗಿದ್ದರೂ ಡಾ. ಕಲಬುರ್ಗಿಯವರು ತಮಗೆ ದೊರೆತ ಹೊಸದಾದ ಹಸ್ತಪ್ರತಿಗಳ ಆಧಾರದಿಂದ ಇವುಗಳನ್ನು ಶಾಸ್ತ್ರೀಯವಾಗಿ ಪರಿಷ್ಕರಣಕ್ಕೆ ಒಳಪಡಿಸಿ ಶುದ್ಧರೂಪದಲ್ಲಿ

ಪ್ರಕಟಿಸಲು ಮುಂದಾಗಿ ಈ ಕೃತಿಗೆ ಡಾ. ಎಂ.ಎಂ. ಕಲಬುರ್ಗಿಯವರು ಬರೆದ ಪ್ರಸ್ತಾವನೆ ವಚನ ಸಂಪಾದನೆಯ ಪರಂಪರೆ ಈ ಸಂಕಲನಗಳ ವಿಶೇಷತೆ ಮತ್ತು ಇದಕ್ಕೆ ಬಳಿಸಿದ ಸಂಪಾದನೆಯ ವೈಧಾನಿಕತೆಯನ್ನು ಒಳಗೊಂಡು ಈ ವಚನ ಸಂಪಾದನೆಯ ಮೌಲಿಕ ಕೃತಿ ಎನಿಸಿಕೊಂಡಿದೆ.

ಬಸವಣ್ಣನವರ ಟೀಕಿನ ವಚನಗಳು ಸಂಪುಟ ೧ : ೨ ೧೯೭೮

ಕನ್ನಡದ ವಚನಗಳ ಟೀಕಾ ಸಾಹಿತ್ಯ ಸಂಪಾದನೆಯ ಕೃತಿಗಳಲ್ಲಿಯೇ ಡಾ. ಎಂ.ಎಂ. ಕಲಬುರ್ಗಿಯವರು ಬಸವಣ್ಣನವರ ಟೀಕಿನ ವಚನಗಳು ಸಂಪಾದನೆಯ ಕೃತಿಯ ಒಂದು ಮೈಲಿಗಲಲ್ಲು ಬಸವಣ್ಣನವರ ಷಟಸ್ಥಲವಚನಗಳಿಗೆ ಐದು ಜನ ಅನುಭಾವಿಗಳು ಬರೆದ ಟೀಕೆಗಳನ್ನು ಒಂದೇ ಕಡೆಗೆ ಜೋಡಿಸಿರುವುದು ಇದರ ವಿಶೇಷತೆ. ಐದು ಟಿಕೆಗಳಿಗೆ ಸಂಬಂದಿಸಿದ ದೊರೆಯುವ ಎಲ್ಲ ಹಸ್ತ ಪ್ರತಿಗಳನ್ನು ಪರಿಶೀಲಿಸಿ ಪಾಠಾಂತರಗಳನ್ನು ಗುರುತಿಸಿ ತುಂಬಾ ಅಚ್ಚುಕಟ್ಟಾಗಿ ಪರಿಷ್ಕರಿಸಿರುವದು ಪ್ರಸ್ತಾವನೆಯಲ್ಲಿ ಟೀಕಾ ಸಾಹಿತ್ಯ ಪರಂಪರೆ ವಚನ ಟೀಕಾ ಸಾಹಿತ್ಯದ ಬೆಳವಣಿಗೆ ಪ್ರಸ್ತುತ ಟೀಕೆಗಳ ಸ್ವರೂಪ ಟೀಕಾಕಾರರ ಇತಿ ವೃತ್ತ ದೃಷ್ಠಿ ಧೋರಣೆ, ಟೀಕೆಗಳ ಸಾಧನೆ, ಶಿಲ್ಪ, ಸಾಂಸ್ಕೃತಿಕ ಮಹತ್ವ ಪರಿಷ್ಕರಣ ವಿಧಾನ ಹಸ್ತ ಪ್ರತಿಗಳ ಪರಿಚಯ ಇತ್ಯಾದಿ ಸಂಪಾದನೆಗೆ ಸಂಬಂಧಿಸಿದ ಸಂಗತಿಗಳನ್ನು ವ್ಯವಸ್ಥಿತವಾಗಿ ಅಳವಡಿಸಿರುವುದು ಅನುಬಂಧಗಳಲ್ಲಿ ವಚನಗಳ ತೌಲನಿಕ ಆಕಾರಾದಿ, ಗಮನಾರ್ಹ ಪದಕೋಶ ಜೋಡಿಸಿರುವುದು ಕೃತಿ ಮುದ್ರಣದಲ್ಲಿ ನೂತನ ವಿನ್ಯಾಸ ರೂಪಿಸಿರುವುದು ಇದರ ವಿಶೇಷತೆಗಳು.

" ಬಸವಣ್ಣನವರ ಟೀಕಿನ ವಚನಗಳು" ಸಂಪಟು –೧ :೨ ಪ್ರಥಮ ಆವೃತ್ತಿ ೧೯೭೮ ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

ಡಾ. ಎಂ.ಎಂ. ಕಲಬುರ್ಗಿಯವರು ಈ ವಚನ ಸಂಪಾದನೆಯ ಕೃತಿಗೆ ಬರೆದ ಪ್ರಸ್ತಾವನೆಯು ಅತ್ಯಂತ ಮೌಲಿಕವಾಗಿದ್ದು ಇದರಲ್ಲಿ ಟೀಕಾ ಸಾಹಿತ್ಯದ ವ್ಯಾಖ್ಯೆ ಕನ್ನಡದಲ್ಲಿ ಟೀಕಾ ಸಾಹಿತ್ಯ , ವೀರಶೈವ ಟೀಕಾ ಸಾಹಿತ್ಯ ಕನ್ನಡ ಭಾಷಾ ಸಾಹಿತ್ಯಕ್ಕೆ ಬರೆದ ಕನ್ನಡದ ಟೀಕೆ ಇವುಗಳ ವಿವರಣೆಯೊಂದಿಗೆ ಬಸವಣ್ಣನವರ ಟೀಕಿನ ವಚನಗಳಲ್ಲಿ.

೧ನೇ ಟೀಕೆ " ಶ್ರೀ ಗುರು ಬಸವರಾಜ ದೇವರು ನಿರೂಪಿಸಿದ ಷಟಸ್ಥಲದ ವಚನ ವ್ಯಾಖ್ಯಾನ" ಎಂಬುದು ಇದರ ಹೆಸರು ಈ ಗ್ರಂಥದ ಕರ್ತೃ ತನ್ನ ಹೆಸರಿನ ಬಗೆಗೆ ಮೌನ ತಾಳುತ್ತಾನೆ. ಶ್ರೀ ಗುರುಬಸವಲಿಂಗಾಯನಮಃ ಎಂಬ ವಾಕ್ಯಕ್ಕೆ ಬರೆದ ವಿಸ್ತಾರವಾದ ಟೀಕೆಯೊಂದಿಗೆ ಇದು ಪ್ರಾರಂಭವಾಗುತ್ತದೆ.

ಡಾ. ಎಂ.ಎಂ. ಕಲಬುರ್ಗಿಯವರು ೧ನೇ ಟೀಕಾಕಾರನ ವಚನ ಟೀಕೆಯಲ್ಲಿ ತುಂಗಭದ್ರೆ ಹಂಪೆಯ ವಿರೂಪಾಕ್ಷ ಕೊಟ್ಟೂರೇಶ್ವರ, ಕೊಟ್ಟೂರು ಇತ್ಯಾದಿ ಉಲ್ಲೇಖಗಳು ಆಗಾಗ ಬರುವುದರಿಂದ ಈತನು ಹಂಪೆಯ ಪ್ರದೇಶದವನಿರಬಹುದು , ಗುಳ್ಳಿರಾಮನಕೆರೆ, ಮರಗನಕೆರೆ, ಸೂಳಿಕೆರೆ ಇತ್ಯಾದಿ ಕೆರೆಗಳನ್ನು ಉಲ್ಲೇಖಿಸಿರುವುದರಿಂದ ಇವುಗಳ ನೆರೆ ಹೊರೆಯ ಪ್ರದೇಶದವನಾಗಿರಬಹುದೆಂದು ಹೇಳಿದ್ದಾರೆ. ೧ನೇ ಟೀಕಾಕಾರನು ತನ್ನ ವಚನಗಳ ಟೀಕೆಗಳಲ್ಲಿ ಬಳಸಿದ ಭಾಷಾ ಪ್ರಯೋಗ ಮತ್ತು ಟೀಕೆ ಉದ್ದಕ್ಕೂ ಬರುವ ಲೆಕ್ಕಾನ, ವಡೇದಾರ, ವೋಪದಾರ , ಮೂಲದಾರ, ದುಕಾನ ಮೊದಲಾದ ಉರ್ದು ಪದಗಳ ನಿರರ್ಗಳ ಬಳಕೆ ಮತ್ತು ಕನ್ನಡ ಭಾಷೆಗಳ ಆಧುನಿಕತೆಗಳು ಈತನು ೧೯ನೆಯ ಶತಮಾನಕ್ಕೆ (೧೮೭೦) ನಿಲ್ಲುತ್ತದೆ ಎಂದು ಹೇಳುತ್ತಾರೆ.

೨ನೇ ಟೀಕೆ : ಈ ಟೀಕೆಯ ಹೆಸರು ಮತ್ತು ಟೀಕಾಕರ್ತೃವಿನ ಹೆಸರು ಇನ್ನೂ ನಿಗೂಢವಾಗಿದೆ ಎಂದು ಹೇಳಿದ ಡಾ. ಎಂ.ಎಂ. ಕಲಬುರ್ಗಿಯವರು ಟೀಕಾಕಾರನು ಹೇಳುವ ಗುರು ಪರಂಪರೆಯ ಆಧಾರದಿಂದ ರೇವಣಸಿದ್ದೇಶ್ವರ ಸ್ವಾಮಿಗಳು ಇದರ ಕರ್ತೃಗಳೆಂದು ಊಹಿಸಿದ್ದಾರೆ. ಪ್ರಸ್ತುತ ಟೀಕೆಯು ೧೮ನೆಯ ಶತಮಾನದಲ್ಲಿ ಹುಟ್ಟಿರಬಹುದೆನಿಸುತ್ತದೆ ಎಂದು ಹೇಳಿದ್ದಾರೆ. ಈ ಟೀಕಾಕಾರನು ಸಾಮಾನ್ಯವಾಗಿ ವಚನಕ್ಕೆ ಒಂದು ಅರ್ಥವನ್ನು ಬರೆಯುತ್ತಿದ್ದರೂ ಕ್ವಚಿತವಾಗಿ ಎರಡು ಅರ್ಥಗಳನ್ನು ಬರೆಯುತ್ತಾರೆ. ತೀರ ಕ್ವಚಿತವಾಗಿ ಮೂರು ಅರ್ಥಗಳನ್ನು ಬರೆದಿದ್ದಾನೆ. ಒಂದನೆಯದು ಶಬ್ದಗಳಿಗೆ ಬರೆದ ಪರಿಮಿತ ಅರ್ಥವಾಗಿರದೆ ವಾಕ್ಯ ರೂಪದಲ್ಲಿ ಬಂದ ಅರ್ಥವಾಗಿದ್ದರೆ , ಎರಡನೆಯದು ಗದ್ಯದಲ್ಲಿ ಬರೆದ ಸಾರರೂಪದ ಅರ್ಥವಾಗಿದೆ ಎಮದು ತಿಳಿಸಿ ಉದಾಹರಣೆ ಮೂಲಕ ಟೀಕಾಕಾರನ ಅರ್ಥನಿರೂಪಣೆಯನ್ನು ಉದಾಹರಣೆಗಳಿಂದ ವಿವರಿಸುತ್ತಾರೆ.

೩ನೇ ಟೀಕೆ : "ಬಸವರಾಜದೇವರ ಷಟಸ್ಥಲದ ಬೆಡಗಿನ ಟೀಕು" ಎಂಬುದು ಇದರ ಹೆಸರು ಈ ಟೀಕೆಯು ಕರ್ತೃ ಸೋಮಶೇಖರ ಶಿವಯೋಗಿಯೆಂದು ಕೊನೆಗೆ ಬರುವ 'ಸಚ್ಚಿದಾನಂದನಿತ್ಯ ಪರಿಪೂರ್ಣ ಅವಿರಳ ಪರಂಜ್ಯೋತಿ ಲೀಲಾ ವಿಗ್ರಹಮೂರ್ತಿಯಾದ ಶ್ರೀ ಸೋಮಶೇಖರ ಲಿಂಗ ಚರಣಾರವಿಂದ ಮಕರಂದರ ಸಪಾನಮತ್ತ ಮಧುಕರಾಯ ಮಾನ ಸೋಮಶೇಖರ ಶಿವಯೋಗಿಕೃತ ಬಸವರಾಜದೇವರ ಷಟಸ್ಥಲದ ವಚನದ ಬೆಡಗಿನ ಟೀಕು ಪರಿಸಮಾಪ್ತ ಮಂಗಳ ಮಹಾ ಶ್ರೀ ಶ್ರೀ" ಎಂದು ಗದ್ಯಖಂಡದಿಂದ ಸ್ಪಷ್ಟವಾಗುತ್ತದೆ. ಸೋಮಶೇಖರ ಶಿವಯೋಗಿಯ ಕಾಲವನ್ನು " ಕೊಡಗು ಜಿಲ್ಲೆಯ ಸೋಮವಾರ ಪೇಟೆ ತಾಲೂಕಿನ ಮಮದಾಪುರಕ್ಕೆ ಸಂಬಂಧಿಸಿದ ಶಾಸನದಲ್ಲಿ ಈತನ ಹೆಸರು ಸೂಚಿಸಿರುವುದರಂದ ಈ ಶಾಸನದ ಕಾಲವಾದ ೨೫-೧೦-೧೮೪೩ ರಲ್ಲಿ ಸೋಮಶೇಖರ ಶಿವಯೋಗಿ ಬದುಕಿದ್ದನೆಂಬುದು ಸ್ಪಷ್ಟ" (ಮಾರ್ಗ : ೫ ಪುಟ. ೧೮೧) ಸೋಮಶೇಖರ ಶಿವಯೋಗಿಯು ಬಸವಣ್ಣನವರ ಷಟಸ್ಥಲದ ವಚನ ಸಂಪುಟದಿಂದ ಬೆಡಗಿನ ವಚನಗಳನ್ನು ಆಯ್ದು ಟೀಕೆ ಬರೆದಿರುವುದು ವಿಶೇಷತೆ ಎಂದು ಹೇಳಿದ್ದಾರೆ ಡಾ. ಎಂ.ಎಂ. ಕಲಬುರ್ಗಿಯವರು.

೪ನೇ ಟೀಕೆ : ಈ ಟೀಕೆಯ ಹೆಸರು "ಬಸವ ವಚನಾಮೃತಸಾರ ಮೃತ" ವೆಂದೂ ಕರ್ತೃ ಗುರುಬಸವರಾಜದೇವ ಎಂದು ನಿರ್ಧರಿಸಿದ್ದಾರೆ. ಈತನ ಕಾಲವನ್ನು ೧೭ನೆಯ ಶತಮಾನದವನಾಗಿರವವು ಸಂಭವವಿದೆ ಎಂಇದದ್ದಾರೆ. ಈ ವಚನ ಟೀಕಾಕಾರನು ವಚನಗಳ ಒಳ ಮಿಡಿತವನ್ನೇ ಸಾರವತ್ತಾದ ಸಂಗ್ರಹವತ್ತಾದ ಗದ್ಯದಲ್ಲಿ ಇಲ್ಲಿಯ ಟೀಕೆಗಳು ವ್ಯಕ್ತಪಡಿಸುತ್ತವೆಂದು ಹೇಳಿ ಉದಾಹರಣೆಗಳನ್ನು ನೀಡಿದ್ದಾರೆ.

೫ನೇ ಟೀಕೆ : "ಬಸವೇಶ್ವರ ದೇವರ ವಚನಸಾರಾರ್ಥ" ಎಂಬುದು ಈ ಕೃತಿಯ ಹೆಸರು ಪರ್ವತದ ಶಿವಯೋಗಿಯು ಇದರ ಕರ್ತೃ ಈ ಅಂಶವನ್ನು ಭಕ್ತ ಸ್ಥಲದ ಅಂತ್ಯದಲ್ಲಿ ಬರುವ "ಶ್ರೀಮತ್ ಷಟಸ್ಥಲಾದ್ವೈತ ವಿದ್ಯಾಪ್ರಚೋದಿತ ಶ್ರೀ ವೀರಮಾಹೇಶ್ವರ ಬಾಲೆಂದು ಪುರದ ಹರೀಶ್ವರ ಶಾಂತವೀರೇಶ್ವರ ಚಿದ್ಗರ್ಭಸಂಭವ ಪರ್ವತ ಶಿವಯೋಗಿಶ್ವರ ವಿರಚಿತ ಮಪ್ಪ ಬಸವೇಶ್‌ವರ ದೇವರ ವಚನಸಾರಾರ್ಥ" ಎಂಬ ವಾಕ್ಯ ಸ್ಪಷ್ಟಪಡಿಸುತ್ತ ದೆ. ಈತನು ಏಳಂದೂರ ಹರೀಶ್ವರ ಶಾಂತ ವೀರೇಶ್ವರನ ಶಿಷ್ಯನೆಂದು ಸೂಚಿಸುತ್ತದೆ. ಪರ್ವತ ಶಿವಯೋಗಿಯ ಕಾಲವನ್ನು ಕ್ರಿ.ಶ. ೧೭೫೦ ಎಂದು ದೊರೆಯುವ ವಚನಗಳ ಹಸ್ತ ಪ್ರತಿಗಳ ಆಧಾರದಿಂದ ಸ್ಪಷ್ಟಪಡಿಸಿದ್ದಾರೆ. " ಬಸವಣ್ಣನವರ ಟೀಕಿನ ವಚನಗಳು" ಸಂಪಾದನೆಯಲ್ಲಿ ಡಾ. ಎಂ.ಎಂ. ಕಲಬುರ್ಗಿಯವರು ಪ್ರತಿಯೊಬ್ಬ ಟೀಕಾಕಾರನ ಗ್ರಂಥದ ಹೆಸರು ಅದರ ಕರ್ತೃ ಹಾಗೂ ಆತನ ಕಾಲವನ್ನೂ ಸಮರ್ಥವಾದ ಆಕರಗಳೊಂದಿಗೆ ವಿಶ್ಲೇಷಿಸಿದ್ದಾರೆ. ಐದು ವಚನ ಟೀಕೆಗಳನ್ನು ವಿಶ್ಲೇಷಿಸಿದ ಡಾ. ಕಲಬುರ್ಗಿಯವರು ೧ನೇಯದು ೧೯ನೇ ಶತಮಾನದಲ್ಲಿ, ೨ನೇಯದ್ದು ೧೮ನೇ ಶತಮಾನದಲ್ಲಿ ಹುಟ್ಟಿರಬಹುದು , ೩ ಮತ್ತು ೫ನೇಯುವು ೧೮ನೇ ಶತಮಾನದಲ್ಲಿ ಹುಟ್ಟಿವೆ. ೪ನೇಯದು ಬಹುಶಃ : ೧೭ನೇಯ ಶತಮಾನದಲ್ಲಿ ಸಂಕಲಿತವಾಗಿದ್ದರೂ ಇಲ್ಲಿಯ ವಚನ ಟೀಕೆಗಳ ಸೃಷ್ಟಿ ೧೫ನೆಯ ಶತಮಾನದಲ್ಲಿ ಹುಟ್ಟಿದ ಲಿಂಗಲೀಲಾ ವಿಲಾಸಕ್ಕೆ ಚಾರಿತ್ರಕ್ಕೆ ಪ್ರಾಚೀನ ಎಂದು ಹೇಳಬಹುದು ಎಂದು ಹೇಳಿದ್ದಾರೆ.

ಡಾ. ಎಂ.ಎಂ. ಕಲಬುರ್ಗಿಯವರು ಬಸವಣ್ಣನವರ ಟೀಕಿನ ವಚನಗಳು ವಚನ ಸಂಪಾದನೆ ಗ್ರಂಥದಲ್ಲಿ ಟೀಕೆಗಳ ಸಾಧನೆಯನ್ನು ಕುರಿತು ವಿವರಿಸುತ್ತಾರೆ. " ಟೀಕೆಯೆಂಬುದು ಸಾಹಿತ್ಯ ಕೃತಿಗೆ ಬರೆದ ಒಂದು ವಿಧದ ವಿಮರ್ಶೆಯೇ ಸರಿ ಸಾಹಿತ್ಯವನ್ನು ವಿಮರ್ಶಿಸುವ ದೃಷ್ಟಿ ಜನಾಂಗದಿಂದ ಜನಾಂಗಕ್ಕೆ ಕಾಲದಿಂದ ಕಾಲಕ್ಕೆ ಭಿನ್ನವಾಗುವುದು ಸಹಜ. ವಚನ ನಿಧಿಯನ್ನೇ ಕುರಿತು ಹೇಳುವುದಾದರೆ ಅದನ್ನು ಹರಿಹರಾದಿಗಳು ಸಾಹಿತ್ಯ ದೃಷ್ಟಿಯಿಂದ ನೋಡಿದರು ಇಂದು ಅದು ಸಾಮಾಜಿಕ ದೃಷ್ಟಿಯಿಂದ ತುಂಬ ಬೆಲೆಯುಳ್ಳದಾಗಿ ಕಾಣಿಸತೊಡಗಿದೆ." (ಮಾರ್ಗ ಸಂ. ೫ ಪುಟ ೧೮೪)

ಟೀಕಿನ ವಚನಗಳಲ್ಲಿ ವಚನ ಟೀಕಾಕಾರರ ಕಾವ್ಯ ಸೌಂದರ್ಯ ಲೋಕಜ್ಞಾನ, ಪಾಂಡಿತ್ಯ ಜ್ಞಾನ, ಸೂಕ್ಷ್ಮ ನಿರೀಕ್ಷಣೆ ಲೋಕಾನುಭವದ ಸಂಗತಿಗಳು, ಇಲ್ಲಿರುವ ಅನುಭವಿಗಳನ್ನು ಸಂಗ್ರಹಿಸಿ ಆಯಾ ಕಾಲ ಘಟ್ಟದ ಸುಂದರ ಸಾಂಸ್ಕೃತಿಕ ಅಧ್ಯಯನವನ್ನು ನೆಡೆಸಬಹುದೆಂಬ ಸೂಚನೆಯಿನ್ನು ಡಾ. ಎಂ.ಎಂ. ಕಲಬುರ್ಗಿಯವರು ಬಸವಣ್ಣವರ ಟೀಕಿನ ವಚನಗಳು ವಚನ ಸಂಪಾದನಾ ಕೃತಿಯ ಪ್ರಸ್ತಾವನೆಯಲ್ಲಿ ಉದಾಹರಣೆಗಳೊಂದಿಗೆ ವಿವರಿಸಿದ್ದಾರೆ. ಈ ಪಂಚ ಟೀಕೆಗಳು ಬಸವಣ್ಣನವರ ವಚನಗಳ ತಾತ್ವಿಕ ಮುಖವನ್ನು ತೆರೆದು ತೋರಿಸುವಲ್ಲಿ ಬಹುಮಟ್ಟಿಗೆ ಸಾರ್ಥಕವಾಗಿವೆಯೆನ್ನಬಹುದು ಎಂದಿದ್ದಾರೆ.

## ಚೆನ್ನಬಸವಣ್ಣನವರ ಷಟಸ್ಥಲ ವಚನ ಮಹಾ ಸಂಪುಟ : ೧೯೯೦

"ಚೆನ್ನಬಸವಣ್ಣನವರ ಷಟಸ್ಥಲ ವಚನ ಮಹಾ ಸಂಪುಟ " ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆಯ ಕೃತಿಗಳಲ್ಲಿ ಅತ್ಯಂತ ಮಹತ್ವದ ಸಂಪಾದನ ಕೃತಿ ಚನ್ನಬಸವಣ್ಣನವರ ವಚನಗಳನ್ನು ಕುರಿತು ದೊರೆತ "ಚನ್ನಬಸವರಾಜ ದೇವ ಷಡುಸ್ಥಲದ ವಚನ" ಚನ್ನಬಸವೇಶ್ವರ ದೇವರು ನಿರೂಪಿಸಿದ ಅನುಭಾವ ಷಟಸ್ಥಲದ ವಚನಗಳು ಹಾಗೂ ಚನ್ನಬಸವಣ್ಣನವರ ಷಡುಸ್ಥಲದ ನಿರ್ಣಾಯ" ಎಂಬ ಮೂರು ಕೃತಿಗಳ ಸಂಯುಕ್ತ ಸಂಪುಟವಾಗಿದೆ. ಚನ್ನಬಸವಣ್ಣನವರ ವಿವಿಧ ಸ್ಥಲ ಕಟ್ಟಿನ ಕೃತಿಗಳನ್ನು ಮೊದಲಬಾರಿಗೆ ಗುರುತಿಸಿ, ಪರಿಶ್ರಮವಹಿಸಿ, ಪರಿಷ್ಕರಿಸಿ ಒಂದು ಸಂಪುಟದಲ್ಲಿ ಅಳವಡಿಸಿಕೊಟ್ಟಿದ್ದು ಡಾ. ಎಂ.ಎಂ. ಕಲಬುರ್ಗಿಯವರ ಒಂದು ಮಹತ್ವದ ವಚನ ಸಂಪಾದನೆಯ ಕಾರ್ಯವಾಗಿದೆ. ಗದುಗಿನ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆಯಿಂದ ೧೯೯೦ ರಲ್ಲಿ ಪ್ರಥಮ ಆವೃತ್ತಿಯಾಗಿ ಡಾ. ಎಂ.ಎಂ. ಕಲಬುರ್ಗಿಯವರ ಸಂಪಾದನೆಯಲ್ಲಿ ಪ್ರಕಟವಾದ ಈ ಕೃತಿಯು ವಿಸ್ತಾರವಾದ ಪ್ರಸ್ತಾವನೆಯೊಂದಿಗೆ ಚನ್ನಬಸವಣ್ಣನವರನ್ನು ದೃಷ್ಟಿಯಲ್ಲಿಟ್ಟುಕೊಂಡು ಬರೆದ ಹನ್ನೆರಡನೆಯ ಶತಮಾನದ ಒಟ್ಟಾರೆ ಅಂದೋಲನದ ಸ್ವರೂಪ ಚಟುವಟಿಕೆಗಳ ಒಳನೋಟಗಳನ್ನು ಪರಿಸರ ಚರಿತ್ರೆ; ಬಾಗೇವಾಡಿ ಕಲ್ಯಾಣ ; ಉಳವಿ ; ವೀರಶೈವ ಧರ್ಮ; ಲಿಂಗವಿಡಿದು ಲಿಂಗ ಸಿದ್ಧಿ ; ಲಿಂಗ ಭೋಗೋಪಭೋಗ ; ವಿವರಣೆಯನ್ನು ನೀಡಿದ್ದಾರೆ. ಪರಿಷ್ಕರಣದಲ್ಲಿ.

೧. ಚೆನ್ನ ಬಸವರಾಜದೇವ ಷಡುಸ್ಥಲದ ವಚನ.

೨. ಚೆನ್ನಬಸವೇಶ್ವರ ದೇವರು ನಿರೂಪಿಸಿದ ಅನುಭಾವ ಷಟಸ್ಥಲದ ವಚನಗಳು.

೩. ಚನ್ನಬಸವಣ್ಣನವರ ಷಡಸ್ಥಲದ ನಿರ್ಣಾಯ ಮೂರು ಕೃತಿಗಳ ವಿವರಣೆ ನೀಡಿದ್ದಾರೆ.

ಚನ್ನಬಸವಣ್ಣನವರ ಷಟಸ್ಥಲ ವಚನ ಮಹಾ ಸಂಪುಟದ ಪ್ರಸ್ತಾವನೆಯಲ್ಲಿ ಡಾ. ಎಂ.ಎಂ. ಕಲಬುರ್ಗಿಯವರು 'ಬಸವಣ್ಣ ; ಚೆನ್ನಬಸವಣ್ಣ ; ಪ್ರಭುದೇವ ಈ ಮೂವರು ಹನ್ನೆರಡನೆಯ

ಶತಮಾನದ ಶರಣ ಸಿದ್ಧಾಂತದ ಮೂವರು ಪ್ರಮುಖ ಲಕ್ಷಣಗಳನ್ನು ಪ್ರತಿಪಾದಿಸುತ್ತಾರೆ. ಪ್ರಧಾನವಾಗಿ ಬಸವಣ್ಣನವರದು ಸಾಮಾಜಿಕ ಸಿದ್ಧಾಂತ, ಪ್ರಭುದೇವರದು ಆಧ್ಯಾತ್ಮಿಕ ಸಿದ್ಧಾಂತ , ಚೆನ್ನಬಸವಣ್ಣನವರದು ಧಾರ್ಮಿಕ ಸಿದ್ದಾಂತ ಇಲ್ಲಿ ಬಸವಣ್ಣನವರು ಮನುಷ್ಯನ ಸಾಮಾಜಿಕ ಜೀವನದ ಬಗ್ಗೆ , ಪ್ರಭುದೇವರು ಮನುಷ್ಯನ ಆಧ್ಯಾತ್ಮಿಕ ಜೀವನದ ಬಗ್ಗೆ ಹೆಚ್ಚು ಮಾತನಾಡಿದರೆ, ಚೆನ್ನ ಬಸವಣ್ಣನವರು ವೀರಶೈವ ಮನುಷ್ಯನ ಧಾರ್ಮಿಕ ಜೀವನದ ಬಗ್ಗೆ ಹೆಚ್ಚು ಮಾತನಾಡುತ್ತಾರೆ. ಹೀಗಾಗಿ ಕೇವಲ ವಚನಗಳನ್ನು ಹೊರತೆಗೆದರೆ ಬಸವಣ್ಣ ಪ್ರಭುದೇವರ ರಚನೆಗಳು ಕ್ರಮೇಣವಾಗಿ ಶುದ್ದ ಸಾಮಾಜಿಕ , ಶುದ್ಧ ಆಧ್ಯಾತ್ಮಿಕ ವಚನ ಸಂಪುಟಗಳಾಗಿ ಪರಿಣಮಿಸುತ್ತವೆ. ಕೇವಲ ಸಾಮಾಜಿಕ ಆಧ್ಯಾತ್ಮಿಕ ವಚನಗಳನ್ನು ಹೊರತೆಗೆದರೆ ಚೆನ್ನಬಸವಣ್ಣನವರ ಕೃತಿ ಶುದ್ದ ವೀರಶೈವ ಧಾರ್ಮಿಕ ವಚನ ಸಂಪುಟವಾಗಿ ಪರಿಣಮಿಸುತ್ತದೆ" ಎಂದು ವಿಶ್ಲೇಷಿಸಿದ್ದಾರೆ. ಪ್ರಸಿದ್ದ ಶರಣರನ್ನು ಅಪ್ರಸಿದ್ದ ಶರಣರನ್ನು ಕುರಿತು ಕಾವ್ಯ ಬರೆದಿರುವ ಚರಿತ್ರೆಯುಗದ ಹರಿಹರ ರಾಘವಾಂಕರು ಸುಪ್ರಸಿದ್ಧರಾದ ಚೆನ್ನಬಸವಣ್ಣನವರ, ಅವರ ತಾಯಿ ನಾಗಲಾಂಬಿಕೆಯ ಚರಿತ್ರೆ ಹೋಗಲಿ ತಪ್ಪಿಯೂ ಇವರಿಬ್ಬರ ಹೆಸರನ್ನು ಹೇಳಿಲ್ಲ. ವಿರೂಪಾಕ್ಷ ಪಂಡಿತ (೧೫೮೪) ಚನ್ನಬಸವ ಪುರಾಣದಲ್ಲಿ 'ಧರೆಯೊಳಗೆ ಸಕಲ ಶರಣರ ಕಥೆಗಳಂ ಕವೀಶ್ವರರೊಲ್ದು ಪೇಳ್ವರೀ ಚೆನ್ನಬಸವೇಶ್ವರನ ಚರಿತ್ರೆಯನದೊರ್ವರುಂ ಪೇಳ್ದುದಿಲ್ಲ" ಎಂಬ ಪೀಟಿಕೆಯನ್ನು ಹಾಕಿಕೊಂಡು ೧೫೮೪ ರಷ್ಟು ತಡವಾಗಿ ಚೆನ್ನಬಸವಣ್ಣನವರನ್ನು ಕುರಿತು ಕೃತಿ ರಚಿಸುತ್ತಾನೆ. ಇವರನ್ನು ಬಿಟ್ಟರೆ ಮುಂದೆ ಮತ್ತೆ ಯಾರೊಬ್ಬರೂ ಚೆನ್ನಬಸವಣ್ಣನವರ ವಿಷಯವಾಗಿ ಕೃತಿ ರಚಿಸುವ ಗೋಜಿಗೆ ಹೋಗಿಲ್ಲವೆಂಬುದೂ ಕುತೂಹಲ ಸಂಗತಿಯಾಗಿದೆ ಎಂದು ಹೇಳಿದ್ದಾರೆ. ಪ್ರಸ್ತಾವನೆಯಲ್ಲಿ ಕಲ್ಯಾಣದಲ್ಲಿ ನಡೆದ ಚಾರಿತ್ರಿಕ ಘಟನೆಗಳನ್ನು ತಿಳಿಸಿಕೊಡುತ್ತ ನಾಗಲಾಂಬಿಕೆ ಚನ್ನಬಸವಣ್ಣನವರ ತಾಯಿ ಎಂಬ ಬಹುಮುಖ್ಯ ಸಂಗತಿಯನ್ನು ಘಟಿವಾಳಯ್ಯನ ವಚನವೊಂದು ಚನ್ನಬಸವಣ್ಣನ ಚರಿತ್ರೆಯನ್ನು ದಾಖಲಿಸುವ ಸಮಕಾಲೀನ ಆಕರವಾಗಿದೆ ಎಂದು ವಚನವನ್ನು ವಿವರಿಸಿದ್ದಾರೆ.

"ಕರವೂರ ನಿರಂಕಾರ –ಸುಜ್ಞಾನಿದೇವಿಯರ
ಬಸುಱಲ್ಲಿ ಬಂದಿರೆನ್ನಬಹುದೇ ಪ್ರಭುದೇವರು ?
ಮಂಡಿಗೆ ಮಾದಿರಾಜ ಮಾದಲಾಂಬಿಕೆಯಮ್ಮನವರ
ಬಸುಱರಲ್ಲಿ ಬಂದಿರೆನ್ನಬಹುದೇ ಬಸವೇಶ್ವರನು?
ಅಕ್ಕನಾಗಲಾಂಬಿಕೆಯಮ್ಮನವರ ಬಸುಱರಲ್ಲಿ
ಬಂದರೆನ್ನಬಹುದೇ ಚನ್ನಬಸವೇಶ್ವರನು ?
ಮೊರಡಿಯ ಮುದ್ದಗೌಡ ಸುಗ್ಗಲೆಯ
ಬಸುರಲ್ಲಿ ಬಂದರೆನ್ನಬಹುದೇ ಸಿದ್ಧರಾಮೇಶ್ವರನು ?

ಇವರು ಒಬ್ಬರಿಂದಾದವರಲ್ಲ ತಮ್ಮಿಂದ ತಾವಾದರು
ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ನಿಲ್ಲು ಮಾಣು".

ಎಂಬ ಘಟ್ಟವಾಳಯ್ಯನ ವಚನವನ್ನು ದಾಖಲಿಸುತ್ತಾರೆ. ೧೬ನೆಯ ಶತಮಾನದ ಪ್ರಾರಂಭದಲ್ಲಿ ಸಿಂಗಿರಾಜನ "ಸಿಂಗರಾಜ ಪುರಾಣ"ವು ಮತ್ತು ದೇವಾಂಗ ದಾಸಿಮಯ್ಯನ ಪುರಾಣ (ಸಾಂಗತ್ಯ)ಳು ಶಿವದೇವನು ಚನ್ನಬಸವಣ್ಣನ ತಂದೆ ಎಂದು ಹೇಳುತ್ತವೆ. ಕಲ್ಯಾಣದಲ್ಲಿ ಶರಣರು ನಡೆಸಿದ ಚಳುವಳಿಯ ಅವಧಿ ೧೨ ವರ್ಷವೆಂದು ಕೆಲವರು, ೩೬ ವರ್ಷವೆಂದು ಕೆಲವರು ಅಭಿಪ್ರಾಯಪಟ್ಟಿರುವರು ೩೬ ವರ್ಷವೇ ಶರಣರ ಚಳುವಳಿಯ ಅವಧಿ ಎಂದು ಬಹುಪಾಲ ಜನ ಒಪ್ಪಿರುವರು. ಚನ್ನಬಸವಣ್ಣನಿಗೆ ೨ನೇ ಪಟ್ಟವೆಂಬ ಪ್ರತೀತಿ ಇರುವುದರಿಂದ ಕಲ್ಯಾಣದಲ್ಲಿ ಹುಟ್ಟಿದ ಅವರ ಜೀವಿತ ಕಾಲಾವಧಿ ೨೫ ವರ್ಷವೆನ್ನಬೇಕಾಗುತ್ತದೆ. ಅಭಿಪ್ರಾಯವನ್ನು ತಿಳಿಸಿದ್ದಾರೆ.

ಕಲ್ಯಾಣದ ಕೊನೆಯ ಘಟನೆಗಳ ನಂತರ ಶರಣರು ಉಳಿವೆಯತ್ತ ಸಾಗುವಲ್ಲಿ ಎದುರಿಸಿದ ಗಂಡಾಂತರಗಳೊಂದಿಗೆ ಶರಣರು ಪ್ರಯಾಣ ಮಾಡಿದ ಈ ಮಾರ್ಗವನ್ನು 'ದಂಡಿನ ದಾರಿ' ಎಂದು ಜನತೆ ಕರೆಯುವುದನ್ನು ಹೇಳಿದ್ದಾರೆ.

ಕಲ್ಯಾಣದ ಕೊನೆಯ ದಿನಗಳ ನಂತರ ಶರಣರು ಉಳಿಮೆಗೆ ಬಂದ ದಾರಿಯನ್ನು ತಿಳಿಸುವ ಸೋದೆಯ ಅರಸು ಸದಾಶಿವರಾಯನ 'ಉಳವೆ ಮಹಾತ್ಮೆ' ಎಂಬ ಕೃತಿಯು ಮಾಹಿತಿಯನ್ನು ಹೇಳುತ್ತಾ ಚನ್ನಬಸವಣ್ಣನವರು ಎಳೆಯ ವಯಸ್ಸಿನಲ್ಲಿಯೇ ಶರಣ ಸಮೂಹದ ಸಂರಕ್ಷಣೆಯ ಹೊಣೆ ಹೊತ್ತು ಉಳಿಮೆಯುವರೆಗೆ ಬಂದು ಅಲ್ಲಿಯೇ ಲಿಂಗೈಕ್ಯರಾದರು ಎಂಬ ವಿಷಯವನ್ನು ತಿಳಿಯಪಡಿಸುವ ಮೂಲಕ ಚನ್ನಬಸವಣ್ಣವರ ಜೀವನ ಕುರಿತಾದ ಸಂಕ್ಷಿಪ್ತ ಚರಿತ್ರೆಯನ್ನು ಡಾ. ಎಂ.ಎಂ. ಕಲಬುರ್ಗಿಯವರು ದೀರ್ಘವಾದ ಪ್ರಸ್ತಾವನೆಯಲ್ಲಿ ದಾಖಲಿಸಿದ್ದಾರೆ.

ಡಾ. ಎಂ.ಎಂ. ಕಲಬುರ್ಗಿಯವರು ಈ ವಚನ ಸಂಪಾದನೆಯ ಪ್ರಸ್ತಾವನೆಯಲ್ಲಿ ಲಿಂಗವಿಡಿದು ಲಿಂಗಸಿದ್ಧಿ ಎಂಬ ವಿಷಯ ನಿರೂಪಿಸುತ್ತ ಚೆನ್ನಬಸವಣ್ಣನವರ ಷಟಸ್ಥಲ ಮಾರ್ಗವನ್ನು ವಿವರಿಸುತ್ತಾರೆ. ಶರಣನಾದವ ಒಂದು ಸ್ಥಲದಲ್ಲಿ ಆರು ಸ್ಥಲಗಳನ್ನು ಅಳವಡಿಸಿಕೊಳ್ಳುತ್ತಾ ಕ್ರಮವಾಗಿ ಆರು ಹಂತಗಳನ್ನು ಏರಿ ಅಂತಿಮ ಹಂತ ಪಡೆಯುತ್ತಾನೆ. ಇದನ್ನು ಮಿಶ್ರಷಡುಸ್ಥಲವೆಂದು ಕರೆಯುತ್ತಾರೆ. ಈ ಷಡುಸ್ಥಲವನ್ನು ಪ್ರಥಮವಾಗಿ ಪ್ರತಿಪಾದಿಸಿದವನಾಗಿ ಚೆನ್ನಬಸವಣ್ಣನಿಗೆ "ಷಡುಸ್ಥಲ ಚಕ್ರವರ್ತಿ" ಎಂಬ ಗೌರವಕ್ಕೆ ಪ್ರಾಪ್ತವಾಗಿರುವುದನ್ನು ಡಾ. ಎಂ.ಎಂ. ಕಲಬುರ್ಗಿಯವರು ದಾಖಲಿಸಿರುವುದು ಮಹತ್ವದ ವಿಷಯವಾಗಿದೆ.

ಚೆನ್ನಬಸವಣ್ಣನವರ ಷಟಸ್ಥಲ ವಚನ ಮಹಾಸಂಪುಟ ಹೆಸರಿನ ಈ ಸಂಪಾದನಾ ಕೃತಿಯಲ್ಲಿ ಮೂರು ಕೃತಿಗಳನ್ನು ಸಂಪಾದಿಸಿ ಕೊಡಲಾಗಿದ್ದು ಅವುಗಳನ್ನು ವಿವರಿಸಿದ್ದಾರೆ.

೧. ಚನ್ನಬಸವರಾಜದೇವ ಷಡುಸ್ಥಲ ವಚನ ಷಡುಸ್ಥಲ ಸ್ಥಲಗಳ ವಿವೇಚನೆಯನ್ನುಳ್ಳ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಹಸ್ತ ಪ್ರತಿಗಳಲ್ಲಿ 'ಚನ್ನಬಸವರಾಜದೇವರ ಷಡುಸ್ಥಲ ವಚನ" ಎಂಬ ಹೆಸರಿನ ತಾಳೆ ಗರಿಯ ಕಟ್ಟು ಚನ್ನಬಸವಣ್ಣನವರ ಷಟಸ್ಥಲದ ವಚನ ಕಟ್ಟುಗಳಲ್ಲಿಯೇ ಇದು ದೊಡ್ಡ ಗಾತ್ರದ್ದಾಗಿದ್ದು ಎಂದು ತಿಳಿಸಿ ಇದರಲ್ಲಿ ೮೭೧ ವಚನಗಳಿವೆ ಎಂದು ಸೂಚಿಸಿದ್ದಾರೆ.

೨. ಚೆನ್ನಬಸವೇಶ್ವರ ದೇವರು ನಿರೂಪಿಸಿದ ಅನುಭಾವ ಷಟಸ್ಥಲದ ವಚನಗಳು ಚೆನ್ನಬಸವಣ್ಣನವರ ಷಟಸ್ಥಲ ವಚನ ಕಟ್ಟುಗಳಲ್ಲಿಯೇ ಹೆಚ್ಚು ಜನಪ್ರಿಯವಾಗಿರುವ ಪ್ರತಿಯಾಗಿದೆ. ೩೨೩ ವಚನಗಳ ಈಕೃತಿ ಪರಿಷ್ಕರಣಕ್ಕಾಗಿ ಬಳಸಿಕೊಂಡಿದ್ದು ಕನ್ನಡ ಅಧ್ಯಯನ ಪೀಠದ ತಾಳೆ ಪ್ರತಿ ನಂ. ೨೫ ಗರಿ ೬೮ (ಆಕಾರ ೧.೮" ೮") ಮೂ. ಸಂಕೇತದಿಂದ ಆಧಾರ ಪ್ರತಿಯಾಗಿ ಇಟ್ಟುಕೊಳ್ಳಲಾಗಿದ್ದು. ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟವಾದ ಆವೃತ್ತಿಯಲ್ಲಿ ಸಿಗುವ ಸಮಾನ ವಚನಗಳನ್ನು ಪರಿಸ್ಕರಣದ ವಚನಗಳ ಮುಂದೆ ನೀಡಿರುವದನ್ನು ತಿಳಿಸಿದ್ದಾರೆ.

೩. ಚೆನ್ನಬಸವಣ್ಣನವರ ಷಡುಸ್ಥಲದ ನಿರ್ಣಯ : ಆರು ಸ್ಥಲಗಳಲ್ಲಿ ಚೆನ್ನಬಸವಣ್ಣವರ ೧೨೨ ವಚನಗಳನ್ನು ಸಂಕಲಿಸಿದ ಈ ಕೃತಿಯನ್ನು ಆಧಾರ ಪ್ರತಿಯನ್ನು ಇಟ್ಟುಕೊಂಡಿದ್ದು ಕನ್ನಡ ಅಧ್ಯಯನ ಪೀಠದ ತಾಳೆಗರಿ ( ನಂ. ೧೫೩ ಗರಿ ೨೨೧೦೫ ೧೭೫) ಯನ್ನು 'ಮೂ' ಸಂಕೇತದಿಂದ ಆಧಾರ ಪ್ರತಿಯನ್ನಾಗಿ ಇಟ್ಟುಕೊಂಡಿದ್ದನ್ನು ತಿಳಿಸಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟಿಸಿದ "ಚನ್ನಬಸವಣ್ಣನವರ ವಚನಗಳು" ಕೃತಿಯನ್ನು ದ್ವಿತೀಯ ಆವೃತ್ತಿಯನ್ನು ಪಾಠಾಂತರಕ್ಕಾಗಿ ಬಳಸಿಕೊಂಡಿರುವುದನ್ನು ತಿಳಿಸಿದ್ದಾರೆ.

ಪ್ರಥಮ ಸಂಪಾದನಾ ಸಂಕಲನದ ೮೭೧ ವಚನಗಳು ದ್ವಿತೀಯ ವಚನ ಸಂಕಲದ ೩೨೩ ವಚನಗಳು ತೃತೀಯ ಸಂಕಲದನ ೧೨೨ ವಚನಗಳು ಒಟ್ಟಾರೆ ೧೩೧೬ ವಚನಗಳ ಮಹಾಸಂಪುಟದ ವಚನ ಸಂಪಾದನೆಯು ಈ ಕೃತಿ ಡಾ. ಎಂ.ಎಂ. ಕಲಬುರ್ಗಿಯವರು ವಚನ ಸಾಹಿತ್ಯ ಸಂಪಾದನೆಗೆ ನೀಡಿದ ಮೌಲಿಕ ಗ್ರಂಥವಾಗಿದೆ.

ವಚನಶಾಸ್ತ್ರ ಸಾರ –೧೯೬೨ :

ವಚನ ಸಾಹಿತ್ಯದ ಸಂಕಲನ ಗ್ರಂಥಗಳ ಇತಿಹಾಸದಲ್ಲಿ ಶೂನ್ಯ ಸಂಪಾದನೆಗಳ ತರುವಾಯ ಒಂದು ಗಮನಾರ್ಹ ಪ್ರಯತ್ನ ಡಾ. ಫ.ಗು. ಹಳಕಟ್ಟಿಯವರ ವಚನ ಶಾಸ್ತ್ರಸಾರ. ವೀರಶೈವ ಧರ್ಮದ ನಿಜಸ್ವರೂಪವನ್ನ ತಿಳಿಸಲು ಸಹಾಯಕವಾಗುವ ಈ ವಚನ ಸಂಕಲನ ಗ್ರಂಥವು . ಫ.ಗು. ಹಳಕಟ್ಟಿಯವರ

ನಿರಂತರವಾದ ಕಠಿಣ ಪರಿಶ್ರಮದ ಫಲವಾಗಿ ೧೯೨೩ ರಿಂದ ೧೯೫೩ ರ ವರೆಗಿನ ೩೦ ವರ್ಷಗಳ ಅವಧಿಯಲ್ಲಿ ಮೂರು ಭಾಗಗಳಲ್ಲಿ ಪ್ರಕಟವಾಯಿತು. ಇದರ ಒಂದನೆಯ ಭಾಗವು ಡಾ. ಹಳಕಟ್ಟಿಯವರು ೧೯೩೧, ೧೯೩೩ ರಲ್ಲಿ ದ್ವಿತೀಯ ಆವೃತ್ತಿಯಲ್ಲಿ ಪರಿಷ್ಕರಿಸಿ ಪ್ರಕಟಿಸಿದರು. ಪೀಠಿಕಾಸ್ಥಲ, ಭಕ್ತ ಸ್ಥಲ, ಮಾಹೇಶ್ವರ ಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಿ ಸ್ಥಲ, ಶರಣ ಸ್ಥಲ , ಐಕ್ಯ ಸ್ಥಲ, ನಿರವಯ ಎಂಬ ಶೀರ್ಷಿಕೆಯ ಮೂಲಕ ೨೬೬೫ ವಚನಗಳ ಸಂಕಲನವನ್ನು ಡಾ. ಹಳಕಟ್ಟಿಯವರು ಪ್ರಕಟಿಸಿದ್ದಾರೆ. ಇದರ ಮಹತ್ವವನ್ನು ಅರಿತ ಮತ್ತು ಅದರ ಪ್ರತಿಗಳು ಲಭ್ಯವಿಲ್ಲವೆಂದು ತಿಳಿದ ಡಾ. ಎಂ.ಎಂ. ಕಲಬುರ್ಗಿಯವರು ಮತ್ತು ಡಾ. ವೀರಣ್ಣ ರಾಜೂರ ಅವರು ಗದುಗಿನ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ವೀರಶೈವ ಅಧ್ಯಯನ ಸಂಸ್ಥೆಯ ವತಿಯಿಂದ ಇದನ್ನು ತೃತೀಯ ಆವೃತ್ತಿಯಾಗಿ ಪರಿಷ್ಕರಣಗೊಳಿಸಿ ೧೯೮೦ರಲ್ಲಿ ಪ್ರಕಟಗೊಳಿಸಿದರು. ಮರುಮುದ್ರಣವಾಗಿ ಪೀಠಾರೋಹಣ ರಜತ ಸಂಪುಟ : ೨೧ ವಚನ ಶಾಸ್ತ್ರಸಾರ ಭಾಗ -೧ ಜುಲೈ ೧೯೯೯ ರಲ್ಲಿ ಪ್ರಕಟಿಸಿದ್ದಾರೆ. ೭೭೮ ಪುಟಗಳ ಗ್ರಂಥದಲ್ಲಿ ೨೬೬೫ ವಚನಗಳಿವೆ. ಡಾ. ಫ.ಗು.ಹಳಕಟ್ಟಿಯವರು ಮೂರುಭಾಗಗಳಲ್ಲಿ ಪ್ರಕಟಿಸಿದ ವಚನಶಾಸ್ತ್ರ ವಚನ ಸಂಪಾದನೆಯನ್ನು ಒಂದು ಸಂಪುಟದಲ್ಲಿ ಸಂಗ್ರಹಿಸಿದ್ದಾರೆ.

೧.ವಚನಶಾಸ್ತ್ರಸಾರ ಭಾಗ -೧ (ಪ್ರಥಮ ಆವೃತ್ತಿ ) ೧೯೨೩

ವಚನಶಾಸ್ತ್ರ ಸಾರ ಭಾಗ-೧ (ದ್ವಿತಿಯ ಆವೃತ್ತಿ ) ಪೂರ್ವಾರ್ಧ -೧೯೩೧, ಉತ್ತರಾರ್ಧ - ೧೯೩೩

೨. ವಚನಶಾಸ್ತ್ರಸಾರ ಭಾಗ -೨ (ಪ್ರಥಮ ಆವೃತ್ತಿ ) ೧೯೩೮

೩. ವಚನಶಾಸ್ತ್ರ ಸಾರ ಭಾಗ-೩ (ಪ್ರಥಮ ಆವೃತ್ತಿ ) ಪೂರ್ವಾರ್ಧ -೧೯೩೯, ಉತ್ತರಾರ್ಧ -೧೯೫೩

ಒಬ್ಬರಿಂದ ಸಂಪಾದಿತ ವಚನ ಕೃತಿಯನ್ನು ಇನ್ನೊಬ್ಬರು ಪರಿಷ್ಕರಿಸಿ ಪ್ರಕಟಿಸಿರುವುದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹೊಸ ಉಪಕ್ರಮವೆನಿಸಿದೆ. ಈ ವಚನ ಸಂಪಾದನೆಯಲ್ಲಿ ಹಳಕಟ್ಟಿಯವರು ಸ್ವೀಕರಿಸಿದ ವಚನಕ್ಕೆ ದಕ್ಕೆ ಬರದಂತೆ ಜೊತೆಗೆ ವೀರಶೈವ ತತ್ವಕ್ಕೂ ಚ್ಯುತಿ ಬರದಂತೆ ಗ್ರಂಥ ಸಂಪಾದನೆಯ ತತ್ವಗಳ ಆಧಾರದಲ್ಲಿ ಈ ಪರಿಷ್ಕರಣ ಕಾರ್ಯವನ್ನು ಪೂರ್ಣಗೊಳಿಸಿರುವುದಾಗಿ ಡಾ. ಎಂ.ಎಂ. ಕಲಬುರ್ಗಿಯವರು ಹಾಗೂ ವೀರಣ್ಣ ರಾಜೂರ ಅವರು ಪ್ರಸ್ತಾವನೆಯಲ್ಲಿ ತಿಳಿಸಿದ್ದಾರೆ.

ವಚನಶಾಸ್ತ್ರಸಾರ ಭಾಗ-೧ ಪರಿಷ್ಕರಣೆಗಾಗಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟಿತ ಆವೃತ್ತಿಗಳನ್ನು ಬಳಸಿಕೊಂಡಿದ್ದೇವೆ. ಹಳಕಟ್ಟಿಯವರ ಆವೃತ್ತಿಯಲ್ಲಿ ಯಾವುದೇ ವಚನ ತನ್ನಷ್ಟಕ್ಕೆ ತಾನೇ ಸಮಂಜಸವಾದ ಅರ್ಥವನ್ನು ಕೊಡುತ್ತಿದ್ದರೆ ಅನ್ಯ ಆವೃತ್ತಿಗಳಲ್ಲಿ ಭಿನ್ನಪಾಠವಿದ್ದರೂ ಅದನ್ನು

ಪರಿಷ್ಕರಿಸುವ ಪ್ರಯತ್ನವನ್ನು ಮಾಡಿರುವುದಿಲ್ಲ. ಸಮಂಜಸವಾದ ಅರ್ಥ ಕೊಡದಿದ್ದಲ್ಲಿ ಮಾತ್ರ ಅನ್ಯ ಆವೃತ್ತಿಗಳ ನೆರವಿನಿಂದ ಅದನ್ನು ಪರಿಷ್ಕರಿಸಿದ್ದೇವೆ. ಅನ್ಯ ಆವೃತ್ತಿಗಳ ಪಾಠಾಂತರಗಳು ಅಸಮರ್ಪಕವೆನಿಸಿದಾಗ ಮಾತ್ರ ಊಹೆ ಮಾಡಿಕೊಂಡಿದ್ದೇವೆ. ಊಹೆಗೂ ನಿಲುಕದ ಪಾಠ ಗ್ರಂಥಗಳನ್ನು ಹಾಗೆಯೇ ಇಟ್ಟಿದ್ದೇವೆ. ಕೆಲವು ವಚನಗಳು ಈಗ ಪ್ರಕಟವಾದ ಯಾವುದೇ ಆವೃತ್ತಿಯಲ್ಲಿ ಸಿಗುವುದಿಲ್ಲ. ಇಂಥಲ್ಲಿ 'ಏಕೈಕ ಹಸ್ತ ಪ್ರತಿ ಪರಿಷ್ಕರಣ" ಪದ್ಧತಿಯನ್ನು ಅನುಸರಿಸಿದ್ದೇವೆ.' ಎಂದು ಹೇಳಿದ್ದಾರೆ.

ವಚನಶಾಸ್ತ್ರ ಸಾರ ಭಾಗ-೧ ಪ್ರಸ್ತಾವನೆ ಮೂರನೆ ಆವೃತ್ತಿ ಪುಟ ೨೬

ವಚನಶಾಸ್ತ್ರ ಸಾರ – ಭಾಗ-೧ ರ ಕೊನೆಯ ಅನುಬಂಧದಲ್ಲಿ ಸಂಪಾದನೆಯಲ್ಲಿ ಉಕ್ತವಾದ ವಚನಕಾರರ ಮುದ್ರಿಕೆಗಳು ಮತ್ತು ಆವರ ಹೆಸರುಗಳು, ವಚನಕಾರರು, ವಚನಗಳ ಸಂಖ್ಯೆ , ವಚನಗಳ ಅಕಾರಾದಿಯನ್ನು ಕೊಡಲಾಗಿದೆ. ಡಾ. ಎಂ.ಎಂ. ಕಲಬುರ್ಗಿ ಮತ್ತು ವೀರಣ್ಣ ರಾಜೂರ ಅವರು ಫ.ಗು. ಹಳಕಟ್ಟಿಯವರು ಸಂಪಾದನೆ ಮಾಡಿ ಪ್ರಕಟಿಸಿದ ಅಪರೂಪದ ವಚನ ಸಾಹಿತ್ಯದ ಮಹತ್ವದ ಕೃತಿಯನ್ನು ಪರಿಷ್ಕರಿಸಿಅದಕ್ಕೆ ಕ್ರಮಬದ್ಧವಾದ ವಚನ ಸಂಪಾದನೆಯ ಶಿಸ್ತಿಗೆ ಒಳಪಡಿಸಿದ ಶ್ರೇಯಸ್ಸು ವಚನ ಶಾಸ್ತ್ರಸಾರ ಬಾಗ-೧ ರ ಈ ಸಂಪಾದಕರಿಗೆ ಸಲ್ಲುವುದು.

ಬಸವಣ್ಣನವರ ವಚನ ಸಂಪುಟ ೧೯೯೩

ಡಾ. ಎಂ.ಎಂ. ಕಲಬುರ್ಗಿಯವರ ಬಸವಣ್ಣನವರ ವಚನ ಸಂಪುಟ-೧ ಕರ್ನಾಟಕ ಸರಕಾರದ ಸಮಗ್ರ ವಚನ ಸಾಹಿತ್ಯ ಜನಪ್ರೀಯ ಆವೃತ್ತಿಯ ಪ್ರಕಟಣೆಯ ಯೋಜನೆಗಾಗಿ ಸಿದ್ಧಪಡಿಸಿದ ವಚನ ಸಂಪಾದನೆ ಕೃತಿಯಾಗಿದೆ. ೧೯೯೩ ರಲ್ಲಿ ಪ್ರಕಟಣೆಗೊಂಡ ಈ ಸಂಪಾದನೆಯು ೪೪೧ ಪುಟಗಳೊಂದಿಗೆ ೧೪೨೬ ಬಸವಣ್ಣನವರ ವಚನಗಳ ಸಂಪಾದನೆಯಾಗಿದೆ. ಭಕ್ತ ಸ್ಥಲ, ಮಾಹೇಶ್ವರ ಸ್ಥಲ, ಪ್ರಸಾದಿ ಸ್ಥಲ, ಪ್ರಾಣಲಿಂಗಿ ಸ್ಥಲ, ಶರಣಸ್ಥಲ, ಐಕ್ಯಸ್ಥಲ ಗಳೊಂದಿಗೆ ಹೆಚ್ಚಿನ ವಚನಗಳನ್ನು ಒಳಗೊಂಡಿದೆ. ಅಂದಿನ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾದ ಎಂ. ವೀರಪ್ಪ ಮೊಯಿಲಿ ಅವರು ಮುನ್ನಡಿಯನ್ನಿತ್ತಿದ್ದಾರೆ. ಕೃತಿಯ ಸಂಪಾದಕೀಯದಲ್ಲಿ ಡಾ. ಎಂ.ಎಂ. ಕಲಬುರ್ಗಿಯವರು "ಕರ್ನಾಟಕದ ಇತಿಹಾಸದಲ್ಲಿ ಶಿವಶರಣರ ಚಳುವಳಿ ಒಂದು ಅಪೂರ್ವ ಘಟನೆ. ವಚನಗಳ ಸೃಷ್ಟಿ ಒಂದು ಅನನ್ಯ ಪ್ರಯೋಗ ಸಮಾಜದ ಎಲ್ಲ ವರ್ಗ ಎಲ್ಲ ವರ್ಣಗಳ ಜನಸಮೂದಾಯ ಬಸವಣ್ಣನವರ ನೇತೃತ್ವದಲ್ಲಿ ಕೈಗೊಂಡಿದ್ದ ವ್ಯಕ್ತಿ ಕಲ್ಯಾಣ ಮತ್ತು ಸಮಾಜ ಕಲ್ಯಾಣ ಚಳುವಳಿಯ ಸೃಷ್ಟಿಯೆನಿಸಿದ ವಚನಗಳು ಜಾಗತಿಕ ಸಾಹಿತ್ಯದ ಮಹತ್ವ ಪೂರ್ಣ ಭಾಗವೆನಿಸಿವೆ" ಎಂದು ಹೇಳಿದ್ದಾರೆ.

ಬಸವಣ್ಣನವರ ವಚನಗಳು ಪ್ರಕಟಣೆಗೊಂಡಿದ್ದು ೧೮೮೩ ರಲ್ಲಿ ಅ ಪ್ರಮಾಣ ಕೂಡಲ ಸಂಗಮದೇವಾ ಮುದ್ರಿಕೆಯನ್ನೊಳಗೊಂಡ 'ಶಿವರತ್ನ ಪ್ರಕಾಶ' ಆಮೇಲೆ ಒಂದು ಮೈಲುಗಲ್ಲಿನಂತೆ

ಪ್ರಕಟವಾದುದು ತದನಂತರ "ಬಸವಣ್ಣನವರ ಷಟ್‌ಸ್ಥಲ ವಚನಸಂಪುಟ ಅದು ಬೆಳಕು ಕಂಡುದು ೧೮೮೮ ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟಣೆ ಯೋಜನೆ ಅಸ್ತಿತ್ವಕ್ಕೆ ಬಂದುದು ಒಂದು ಶತಮಾನದ ಅವಧಿಯಲ್ಲಿ ಎಂಬುದು ಯೋಗಾಯೋಗದೊಂದಿಗೆ ವಚನ ಸಾಹಿತ್ಯ ಪ್ರಕಟಣೆಯ ಶತಮಾನಸ್ಮರಣೆಯಾಗಿದೆ.

"ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟಣೆಯ ಯೋಜನೆಯಲ್ಲಿ ಒಟ್ಟು ಹತ್ತು ಸಾವಿರ ಪುಟಗಳ ಇಪ್ಪತ್ತು ಸಾವಿರ ವಚನಗಳನ್ನು ಒಟ್ಟು ಸಮಗ್ರವಾಗಿ ಹೊರತಂದ ಪ್ರಥಮ ಮಹಾತ್ವಾಕಾಂಕ್ಷೆಯ ಯೋಜನೆಯೊಂದಿಗೆ ವಚನ ಸಾಹಿತ್ಯ ಪ್ರಕಟಣೆಯ ಇತಿಹಾಸದಲ್ಲಿ ಒಂದು ಮಹತ್ವದ ದಾಖಲೆಯಾಗಿರುವದನ್ನು ಗುರುತಿಸಿದ್ದಾರೆ.

ಡಾ. ಎಂ.ಎಂ. ಕಲಬುರ್ಗಿಯವರು ತಮ್ಮ "ಬಸವಣ್ಣನವರ ವಚನ ಸಂಪುಟ" ಕ್ಕೆ ಅತ್ಯಂತ ಮಹತ್ವ ಪೂರ್ಣವಾದ ಹಾಗೂ ವಿವರಣಾತ್ಮಕ ಪ್ರಸ್ತಾವನೆಯನ್ನು ಬರೆದಿದ್ದು ಬಸವಣ್ಣನವರ ಜೀವನ ಚರಿತ್ರೆಯ ಸಂಕ್ಷಿಪ್ತ ಅವಲೋಕನವಾಗಿದೆ. "ಕಲ್ಯಾಣದ ಶಿವಶರಣರದು ಕನ್ನಡ ನೆಲದ ಮೇಲೆ ನಡೆದ ಪ್ರಥಮ ಸಮಾಜೋಧಾರ್ಮಿಕ ಆಂದೋಲವಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಜರುಗಿದ ಈ ಆಂದೋಲನದ ನಾಯಕ ವ್ಯಕ್ತಿ ಬಸವಣ್ಣ. ಬಸವಣ್ಣ ಬಾಳಿದ್ದು ಕನ್ನಡ ನಾಡಿನಲ್ಲಿ ಬರೆದದ್ದು ಕನ್ನಡ ಭಾಷೆಯಲ್ಲಿ ಈ ಪರಿಮಿತಿ ಕಾರಣವಾಗಿ ಇವನಿಗೆ ಸಿಗಬೇಕಾದ ಜಾಗತಿಕ ಪ್ರಸಿದ್ಧಿ ಇನ್ನೂ ಸಿಕ್ಕಿಲ್ಲವಾದರೂ ಇವನನ್ನು ಕುರಿತಷ್ಟು ಸಾಹಿತ್ಯ ಕನ್ನಡದಲ್ಲಿ ಯಾರನ್ನು ಕುರಿತು ಹುಟ್ಟಿಲ್ಲ. ಇವನಷ್ಟು ಅಖಂಡ ಕರ್ನಾಟಕದ ಮೇಲೆ ಯಾವ ಧಾರ್ಮಿಕ ಪುರುಷನೂ ಪ್ರಭಾವ ಬೀರಿಲ್ಲ" – ಬಸವಣ್ಣನವರ ವಚನ ಸಂಪುಟ –೧ ಪ್ರಸ್ತಾವನೆ ಪುಟ–೧.

ಬಸವಣ್ಣನವರ ಜೀವನ ಯಾತ್ರೆಯ ಮಜಲುಗಳನ್ನು ಕರ್ಮದಿಂದ ಧರ್ಮಕ್ಕೆ' 'ಅಂಗದಿಂದ ಲಿಂಗಕ್ಕೆ', 'ಲಿಂಗದಿಂದ ಜಂಗಮಕ್ಕೆ' ವಿಸ್ತರಿಸಿದ ಕಾಲಘಟ್ಟದ ಮಹತ್ವವನ್ನು ತಿಳಿಸಿಕೊಟ್ಟಿದ್ದಾರೆ. ಬಸವಣ್ಣನವರು ಜಂಗಮ ಸೇವೆ ಎಂದರೆ ಸಮಾಜ ಸೇವೆಯ ಭಾಗವೆಂಬಂತೆ ತಮ್ಮ ಕಾರ್ಯ ವಿಧಾನಗಳನ್ನು ರೂಪಿಸಿಕೊಂಡು ಈ ಸೇವೆಯಲ್ಲಿ ತಾನೊಬ್ಬನೇ ಅಲ್ಲದೆ ಹೆಂಡತಿಯರಾದ ಗಂಗಾಂಬಿಕೆ, ನೀಲಾಂಬಿಕೆ ತಂಗಿ ನಾಗಲಾಂಬಿಕೆ ತಂಗಿಯ ಮಗ ಚೆನ್ನಬಸವಣ್ಣ ಹೀಗೆ ಇಡೀ ಕುಟುಂಬವನ್ನೇ ಆಂದೋಲನದ ಭಾಗವಾಗಿಸಿದ ಬಸವಣ್ಣ ಸಮಾಜದ ವಿವಿಧ ಸ್ಥರಗಳಿಂದ ಬಂದ ಜನ ಸಮುದಾಯವನ್ನು ಭಾಗವಾಗಿಸಿ ಅದಕ್ಕೆ ಬಹು ದೊಡ್ಡ ಸಾಮೂಹಿಕ ಸ್ವರೂಪ ಕೊಟ್ಟನು. ಅದನ್ನು ಪ್ರಾಚೀನ ಭಾರತದ ಒಂದುಅರ್ಥಪೂರ್ಣ ಜನಪರ ಆಂದೋಲನವಾಗಿಸಿದನು" ಎಂದಿದ್ದಾರೆ.

ಬಸವಣ್ಣನವರ ವಚನಗಳಲ್ಲಿರುವ ವಿಷಯ ವಸ್ತು ವಿವರಣೆಯನ್ನು ಡಾ. ಎಂ.ಎಂ. ಕಲಬುರ್ಗಿಯವರು ಬಸವಣ್ಣನವರ ವಚನ ಅಧ್ಯಯನವನ್ನು ವ್ಯಕ್ತಿ ಶೋಧ, ಸಮಾಜ ಶೋಧ,

ಲೋಕ ಸಂದೇಶ ಶೋಧ, ಮತ್ತು ಸೌಂದರ್ಯ ಶೋಧವಾಗಿದ್ದು . ಈ ನಾಲ್ಕು ನೆಲೆಗಳ ಅಧ್ಯಯನಕ್ಕೆ ವಸ್ತುವಾಗುವ ಶಕ್ತಿ ಬಸವಣ್ಣನವರ ವಚನಗಳಿಗೆ ಎಂದು ಗುರುತಿಸಿ ಅವುಗಳ ಪ್ರಮುಖ ಅಂಶಗಳನ್ನು ವಚನಗಳ ಆಧಾರದ ಹಿನ್ನಲೆಯಲ್ಲಿ ವಿವೇಚನೆ ಮಾಡಿದ್ದಾರೆ.

ಡಾ. ಎಂ.ಎಂ. ಕಲಬುರ್ಗಿಯವರ ಈ ವಚನ ಸಂಪಾದನೆಯ ೧೪೨೩ ವಚನಗಳನ್ನು ೬೫ ವಚನ ಕಟ್ಟುಗಳ ಬೇರೆ ಬೇರೆ ಆಕರಗಳಿಂದ ಸಂಗ್ರಹಿಸಲಾಗಿದೆ. ಇಲ್ಲಿ ಸಂಪಾದನೆಯನ್ನು ಎರಡು ಪ್ರಮುಖ ಭಾಗಗಳನ್ನಾಗಿ ಮಾಡಿಕೊಂಡ ಕಾಂಡ ಒಂದರಲ್ಲಿ ಷಟಸ್ಥಲ ವಚನಗಳು – ೯೬೦ , ಕಾಂಡ – ಎರಡರಲ್ಲಿ ಹೆಚ್ಚಿನ ವಚನಗಳು ಭಾಗದಲ್ಲಿ ೪೬೩ ವಚನಗಳು ಪರಿಶಿಷ್ಟದಲ್ಲಿ ೩ ವಚನಗಳಿದ್ದು ಒಟ್ಟು ೧೪೨೩+೩ ವಚನಗಳು ಸಂಪಾದನೆಯಲ್ಲಿ ಒಳಗೊಂಡಿವೆ.

ಷಟಸ್ಥಲ ವಚನಗಳಿಗೆ ಎಲ್ಲ ದೃಷ್ಟಿ ಉತ್ತಮವಾದ ಶಕಟರೇಪಬಳಸಿರುವ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ತಾಳೆಗರಿ ಪ್ರತಿ (ನಂ. ೫೧) ಯನ್ನು ಆಧಾರ ಕೃತಿಯನ್ನಾಗಿ ಇಟ್ಟುಕೊಂಡಿದ್ದಾರೆ. ವಚನ ಸಂಪಾದನಾ ಕಾರ್ಯದಲ್ಲಿ ಡಾ. ಎಂ.ಎಂ. ಕಲಬುರ್ಗಿಯವರು ಒಂದೇ ಒಂದು ಪ್ರತಿಯನ್ನು ಆಧಾರವಾಗಿಟ್ಟುಕೊಂಡು ಪಾಠ ಮಿಶ್ರಣಕ್ಕೆ ಎಡೆಯಲ್ಲದಂತೆ ಅತ್ಯಂತ ಗ್ರಂಥ ಸಂಪಾದನ ಶಾಸ್ತ್ರದ ಅನ್ವಯ ಮಹತ್ವದ ವಚನಸಂಪಾದನೆಗೆ ಮಾರ್ಗದರ್ಶಿ ನೀಡಿದ ವೈಶಿಷ್ಟ್ಯತೆ ಡಾ. ಕಲಬುರ್ಗಿಯವರದು.

ಕರ್ನಾಟಕ ವಿಶ್ವವಿದ್ಯಾಲಯದ ಆವೃತ್ತಿಯ ೧೩೯೩ ವಚನಗಳಲ್ಲಿ ಎರಡನೆಯ ಕಾಂಡದ ೫೦ ವಚನಗಳನ್ನು ಪ್ರಕ್ಷಿಪ್ತತೆ, ವೃತ್ತಿ ಸ್ವರೂಪ, ಇನ್ನೊಬ್ಬರ ವಚನಗಳೆಂಬ ದೃಷ್ಟಿಯಿಂದ ಕೈಬಿಟ್ಟು ಇಲ್ಲಿ ೬೦ ಹೊಸ ವಚನಗಳನ್ನು ಸೇರಿಸಿ ೧೪೨೩ ವಚನಗಳನ್ನು ಕೊಟ್ಟಿದ್ದಾರೆ. ಉತ್ತಮ ಪಾಠಗಳನ್ನು ಶೋಧಿಸಿ ಯೋಜಿಸಿ ಈ ಆವೃತ್ತಿ ಗುಣಮಟ್ಟವನ್ನು ಹೆಚ್ಚಿಸಲಾಗಿದೆ.

ವಚನ ಸಂಪಾದನೆಯಲ್ಲಿ ಪ್ರಸ್ತಾವನೆಯಲ್ಲಿ ಬಸವಣ್ಣನ ಜೀವನ ಚಿತ್ರಣ ಸ್ಥಲಗಳಲ್ಲಿ ವಚನ ಸಂಯೋಜನೆ ಅನುಬಂಧದಲ್ಲಿ ಕಠಿಣ ಪದಕೋಶ ಷಟಸ್ಥಲ ವಚನಗಳ ಅಕಾರಾದಿ, ಅಕರ ಗ್ರಂಥಗಳ ವಿವರಗಳನ್ನು ನೀಡಿದ್ದಾರೆ.

**ಸಮಗ್ರ ವಚನ ಸಂಪುಟ –೬**

ಡಾ. ಎಂ.ಎಂ. ಕಲಬುರ್ಗಿಯವರು ಸಂಪಾದನೆ ಮಾಡಿದ ವಚನ ಸಾಹಿತ್ಯ ಸಂಪಾದನೆಯಲ್ಲಿ ಮತ್ತೊಂದು ಮಹತ್ವದ ಸಂಪಾದನಾ ಕೃತಿಯಾಗಿದೆ. ಸಮಗ್ರ ವಚನ ಸಂಪುಟ ೬ 'ಸಮಗ್ರ ವಚನ ಸಾಹಿತ್ಯದ ಜನಪ್ರೀಯ ಆವೃತ್ತಿ ಪ್ರಕಟನ ಯೋಜನೆ'ಯ ಹದಿನೈದು ಸಂಪುಟಗಳ ಯೋಜನೆಯಲ್ಲಿ ಇದು ಆರನೆಯ ಸಂಪುಟವಾಗಿದ್ದು, ಈ ಸಂಪುಟದಲ್ಲಿ ಬಸವ ಯುಗದ ಎಲ್ಲ ಶರಣರ ಎಲ್ಲ

ವಚನಗಳನ್ನು ಇದರಲ್ಲಿ ಸಂಗ್ರಹಿಸಿ ಸಂಪಾದನೆ ಮಾಡಲಾಗಿದೆ. ೨೪ ಜನ ವಚನಕಾರರ ಒಟ್ಟು ೧೭೪೪ ವಚನಗಳನ್ನು ೭೧೪ ಪುಟಗಳಲ್ಲಿ ಪ್ರಕಟಿಸಲಾಗಿದೆ. ೨೪ ವಚನಕಾರರ ಹೆಸರು ಮತ್ತು ವಚನಕಾರರ ವಚನಗಳನ್ನು ಪ್ರಮಾಣೀಕರಿಸಲಾಗಿದೆ.

| | | |
|---|---|---|
| ೧. | ಅಂಗಸೋಂಕಿನ ಲಿಂಗ ತಂದೆಗಳ ವಚನ | ೧೦ |
| ೨. | ಅಂಬಿಗರ ಚೌಡಯ್ಯಗಳ ವಚನ | ೨೭೮ |
| ೩. | ಅಗ್ಗವಣಿಯ ಹಂಪಯ್ಯಗಳ ವಚನ | ೪ |
| ೪. | ಅಗ್ಗವಣಿಯ ಹೊನ್ನಯ್ಯಗಳ ವಚನ | ೪ |
| ೫. | ಅಜಗಣ್ಣ ತಂದೆಗಳ ವಚನ | ೧೦ |
| ೬. | ಅನಾಮಿಕ ನಾಚಯ್ಯಗಳ ವಚನ | ೫ |
| ೭. | ಅಪ್ಪಿದೇಯ್ಯಗಳ ವಚನ | ೧ |
| ೮. | ಅಮರಗುಂಡ ಮಲ್ಲಿಕಾರ್ಜುನ ತಂದೆಗಳವಚನ | ೨ |
| ೯. | ಅಮುಗೆದೇವಯ್ಯಗಳ ವಚನ | ೩೦. |
| ೧೦. | ಅರಿವಿನ ಮಾರಿತಂದೆಗಳ ವಚನ | ೩೧೯ |
| ೧೧. | ಅವಸರದ ರೇಕಣ್ಣಗಳ ವಚನ | ೧೦೪ |
| ೧೨. | ಆದಯ್ಯಗಳ ವಚನ | ೪೦೩ |
| ೧೩. | ಆನಂದಯ್ಯಗಳ ವಚನ | ೦೨ |
| ೧೪. | ಆಯ್ದಕ್ಕಿ ಮಾರಯ್ಯಗಳ ವಚನ | ೩೨ |
| ೧೫. | ಉಗ್ಗಡಿಸುವ ಗುಬ್ಬಿದೇವಯ್ಯಗಳ ವಚನ | ೧೦ |
| ೧೬. | ಉಪ್ಪರಗುಡಿಯ ಸೋಮಿದೇವಯ್ಯಗಳ ವಚನ | ೧೧ |
| ೧೭. | ಉರಿಲಿಂಗದೇವರ ವಚನ | ೮ |
| ೧೮. | ಉರಿಲಿಂಗ ಪೆದ್ದಿಗಳ ವಚನ | ೬೩ |
| ೧೯. | ಉಳಿಯುಮೇಶ್ವರ ಚಿಕ್ಕಣಗಳ ವಚನ | ೧೨ |
| ೨೦. | ಎಚ್ಚರಿಕೆ ಕಾಯಕದ ಮುಕ್ತನಾಥಯ್ಯಗಳ ವಚನ | ೧೧ |
| ೨೧. | ಎಲೆಗಾರ ಕಾಮಣ್ಣಗಳ ವಚನ | ೧ |
| ೨೨. | ಏಕಾಂತ ರಾಮಿ ತಂದೆಗಳ ವಚನ | ೭ |

| | | |
|---|---|---|
| ೨೩. | ಏಲೇಶ್ವರದ ಕೇತಯ್ಯಗಳ ವಚನ | ೭೪ |
| ೨೪. | ಒಕ್ಕಲಿಗ ಮುದ್ದಣಗಳ ವಚನ | ೧೨ |
| | ಒಟ್ಟು | ೧೭೪೪ |

ಡಾ. ಎಂ.ಎಂ. ಕಲಬುರ್ಗಿಯವರು ೨೪ ವಚನಕಾರರ ವೃತ್ತಿ ಅವರ ಊರು ಅವರ ಆರಾಧ್ಯ ದೈವ ಅವರೊಡನೆ ಬಂದ ಸಮಕಾಲೀನ ಶರಣರ ವಿಷಯಗಳನ್ನು ಸ್ಪಷ್ಟ ಪಡಿಸುವದರೊಂದಿಗೆ ಒಬ್ಬೊಬ್ಬ ವಚನಕಾರರ ವಚನಗಳು ಬೇರೊಬ್ಬ ವಚನಕಾರರ ಹೆಸರಿನಲ್ಲಿ ದಾಖಲಾಗಿರುವದನ್ನು ಗುರುತಿಸಿ ಆಯಾ ವಚನಕಾರರ ಹೆಸರಿನಲ್ಲಿ ಅಳವಡಿಸಿಕೊಟ್ಟಿರುವುದು ವಚನ ಸಂಪಾದನೆಯ ಅತ್ಯಂತ ಮಹತ್ವ ವಿಷಯವಾಗಿದೆ. ವಚನಕಾರರಲ್ಲಿ ಅನೇಕ ಜಾತಿ ಗಳಿಂದ ವೃತ್ತಿಗಳಿಂದ ಬಂದ ವಚನಕಾರರು ತಮ್ಮ ವಿವಿಧ ಅನುಭವಗಳ ಮೂಲದಿಂದ ಬಂದವರ ವೀರಶೈವ ವಿವಿಧ ತತ್ವಗಳ ಮೇಲೆ ಒತ್ತುಕೊಟ್ಟು ಬದುಕಿದವರ ವೈವಿಧ್ಯಪೂರ್ಣ ಧ್ವನಿ ಈ ವಚನಗಳಲ್ಲಿದೆ" ಎಂದು ಹೇಳಿದ್ದಾರೆ.

ಇವುಗಳಲ್ಲಿ ಶರಣರ ಹೆಸರು ಮತ್ತು ಮುದ್ರಿಕೆಗಳಲ್ಲಿ ಉಂಟಾದ ಗೊಂದಲಗಳನ್ನು ನಿವಾರಿಸಲು ಬೇರೆ ಬೇರೆ ಶರಣರ ಹೆಸರು ಮತ್ತು ಮುದ್ರಿಕೆಗಳಲ್ಲಿ ಉಂಟಾದ ಗೊಂದಲಗಳನ್ನು ನಿವಾರಿಸಲು ಬೇರೆ ಬೇರೆ ಆಧಾರಗಳನ್ನು ಅವಂಬಿಸಲಾಗಿದೆ. ಪಾಠ ಪರಿಷ್ಕರಣಕೆಕ ೬೩ ಪ್ರಾಚೀನ ಗ್ರಂಥಗಳನ್ನು ಬಳಸಿಕೊಂಡದ್ದಾಗ ಹೇಳಿಕೊಂಡಿದ್ದಾರೆ. ಇವುಗಳಿಂದ ಉತ್ತಮ ಪಾಠಗಳ ಶೋಧನೆ, ಪರಿಷ್ಕರಣ, ಸಂಚರಣ ವಿನ್ಯಾಸಗಳು ಈ ಸಂಪುಟಗಳಲ್ಲಿ ಪ್ರಾಪ್ತವಾಗಿ ಈ ಸಂಪಾದನೆ ಮೌಲಿಕವಾಗಿದೆ.

ಉದಾಹರಣೆ ಗಣ ಮಹಾಪಸ ಸಿದ್ಧ ಸೋಮೇಶ್ವರ ಮುದ್ರಿಕೆಯು ಅಜಗಣ್ಣನೆಂದು ಇತ್ತೀಚೆಗೆ ತಿಳಿದು ಬಂದಿದ್ದನ್ನು ಅದನ್ನು ಇಲ್ಲಿ ಸ್ವೀಕರಿಸಲಾಗಿದೆ.

೨. ಅಮರಗುಂಡದ ಮಲ್ಲಿಕಾರ್ಜುನ ತಂದೆಗಳ ವಚನ ಮುದ್ರಿಕೆ "ಅಮರ ಗುಂಡದ ಮಲ್ಲಿಕಾರ್ಜುನ" ಎಂದು ಈವರೆಗೆ ನಂಬಲಾಗಿದ್ದನ್ನು ಇದು ಪುರದ ಸಂಗಣ್ಣನ ಮುದ್ರಿಕೆಯಾಗಿದ್ದು ಮೇಲಿನ ಮುದ್ರಿಕೆ ಮಾಗುಡದ ಮಲ್ಲಿಕಾರ್ಜುನನದು ಎಂದು ಶೋಧಿಸಲಾಗಿದೆ.

೩. ಸಕಲ ಪುರಾತನರ ಕಟ್ಟಿನಲ್ಲಿ ಆಯ್ದುಕ್ಕಿ ಮಾರಯ್ಯನ ಮುದ್ರಿಕೆಯಲ್ಲಿ ದೊರೆಯುವ ೯ ವಚನಗಳು ಆಯ್ದುಕ್ಕಿ ಲಕ್ಕಮ್ಮನವೆಂದು ಶೋಧಿಸಿ ಅಲ್ಲಿಗೆ ವರ್ಗಾಯಿಸಲಾಗಿದೆ.

೪. ಪ್ರಕ್ಷಿಪ್ತ ವಚನಕಾರರಿಗೆ , ಪ್ರಕ್ಷಿಪ್ತ ವಚನಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಈ ಸಂಪುಟದಲ್ಲಿ ಬಿಡಿಸಿ ಕೊಟ್ಟಿರುವುದು ಈಸಂಪುಟದ ಮಹತ್ವದ ಸಂಪಾದನೆಯಾಗಿದೆ.

ಈ ಸಂಪುಟದ ಕೆಲ ಪರಿಷ್ಕರಣಗಳನ್ನು ಉದಾಹರಿಸಬಹುದು

೧. ಕಾಯುವಲ್ಲಿ ಜೀವವು ಪ್ರಚ್ಛನ್ನವೆಂದಡೆ , ಕಾಯದಲ್ಲಿ ಜೀವವು ಪ್ರಚ್ಛನ್ನವೆಂದಡೆ

೨. ಹಠಯೋಗ, ಅಂಬಿಕಾಯೋಗ , ಹಠಯೋಗ ಲಂಬಿಕಾಯೋಗ

೩. ಜ್ಞಾನ ಕಾಯುಂಗೆ ಬಹುಕಾಯುವಿಲ್ಲ , ಜ್ಞಾನ ಕಾಯುಂಗೆ ಬರಕಾಯುವಿಲ್ಲ

೪. ಜಂಗಮ ಲಿಂಗವಾದಲಿ ಜಂಗುಳಿಗಳ ಬಾಗಿಲ ಕಾಯ್ದಿರಬೇಕು, ಕಾಯದಿರಬೇಕು

೫. ಜೀವ ಧನವ ಜತನ ಮಾಡಿ ಜತನ ಮಾಡಿ ಬಳಿರೆಲ್ಲಬಳಿರೆಲ್ಲ , ಭಳಿರೆಲ್ಲಾ ! ಭಳಿರೆಲ್ಲಾ

೬. ಕಾಯಿಧೇನು ಜೀವದನ ದೊಡೆಯ , ...ಜೀವ ಧನ ದೊಡಯ

೭. ಕುಂಬದ ಮಳೆ ಹೋಯಿತು ಕುಂಬದ ಮಳೆ ಹೊಯ್ಯಿತ್ತು

ಹೀಗೆ ಡಾ.ಎಂ. ಎಂ. ಕಲಬುರ್ಗಿಯವರು ಈ ವಚನ ಸಂಪುಟದಲ್ಲಿ ಅನೇಕ ಕಡೆಗಳಲ್ಲಿ ಯೋಗ್ಯ ಪಾಠಗಳನ್ನು ಪರಿಷ್ಕರಿಸಿ ಸಂಪುಟದ ಮೌಲಿಕತೆಯನ್ನು ಹೆಚ್ಚಿಸಿದ್ದಾರೆ.

## ಏಕೋತ್ತರ ಶತ ಸ್ಥಲ (೨೦೧೪)

"ಏಕೋತ್ತರ ಶತ ಸ್ಥಲ" ವಚನಗ್ರಂಥವನ್ನು ಗದುಗಿನ ಶ್ರೀ ತೋಂಟದಾರ್ಯ ಸಂಸ್ಥಾನ ಮಠದ ಲಿಂಗಾಯತ ಅಧ್ಯಯನ ಸಂಸ್ಥೆಯ ಮೂಲಕ" ಸಮಗ್ರ ಲಿಂಗಾಯತ ಅಪ್ರಕಟಿತ ಸಾಹಿತ್ಯ ಪ್ರಕಟನೆ ಯೋಜನೆ' ಯ ಮೂಲಕ ಡಾ. ಎಂ.ಎಂ. ಕಲಬುರ್ಗಿ ಹಾಗೂ ಡಾ. ವೀರಣ್ಣ ರಾಜೂರ ಸಂಪಾದಿಸಿದ್ದಾರೆ. ೧೯೭೪ ರಲ್ಲಿ ಪ್ರೊ. ಎಸ್.ಎಸ್. ಭೂಸನೂರಮಠ ಅವರು ಪ್ರಕಟಿಸಿದ ಈ ಕೃತಿಯನ್ನು ಡಾ. ಎಂ.ಎ. ಕಲಬುರ್ಗಿಯವರು ಡಾ. ವೀರಣ್ಣ ರಾಜೂರ ಅವರೊಂದಿಗೆ ೨೦೧೪ ರಲ್ಲಿ ಪ್ರಕಟಿಸಿದ್ದಾರೆ.

ಏಕೋತ್ತರ ಶತ ಸ್ಥಲ ಸಿದ್ಧಾಂತದ ಅರ್ಥವನ್ನು ವಿವರಿಸುತ್ತ 'ವಿಶ್ವ ಚೈತನ್ಯವನ್ನು ಲಿಂಗಾಯತ ಧರ್ಮವು ಮಹಾಲಿಂಗವೆಂದು ಕರೆದಿದ್ದು . ಇದರ ಕಣವಾಗಿರುವ ಲಿಂಗವು ಮಲತ್ರಯದ ಆವರಣದಿಂದಾಗಿ ಅಂಗ (ವ್ಯಕ್ತಿ) ವೆನಿಸಿಕೊಳ್ಳುತ್ತದೆ. ಈ ಅಂಗವು ತನಗೆ ಆವರಿಸಿದ ಮಲತ್ರಯವನ್ನು ನಿವಾರಿಸಿಕೊಂಡು ಷಟಸ್ಥಲಗಳ ಮೂಲಕ ವಿಕಾಸಗೊಳ್ಳುತ್ತ , ತನ್ನ ಮೂಲ ರೂಪವಾಗಿರುವ ಲಿಂಗವಾಗುವುದು ಮಹಾಲಿಂಗದಲ್ಲಿ ಸಮರಸಗೊಳ್ಳುವುದು ಇಲ್ಲಿ ಮುಖ್ಯವಾಗಿದೆ. ಹೀಗೆ ಅಂಗವು ಷಟ್ಸ್ಥಲಗಳ ಮೂಲಕ ಲಿಂಗವಾಗುವ "ಅಂಗಷಟ್ಸ್ಥಲ" ವನ್ನು ಮತ್ತು ಈ ಲಿಂಗವು ಷಟ್ಸ್ಥಲಗಳನ್ನು ಆಚರಿಸುತ್ತ ಮಹಾಲಿಂಗದಲ್ಲಿ ಸಮರಸವಾಗುವ "ಲಿಂಗಷಟ್ಸ್ಥಲ"ಗಳನ್ನು ಪ್ರತಿಪಾದಿಸುವುದೇ ಏಕೋತ್ತರ ಶತಸ್ಥಲ ಸಿದ್ಧಾಂತವಾಗಿದೆ ವಿಷಯವಾಗಿದೆ" ಎಂದು ಅರ್ಥೈಸಿದ್ದಾರೆ.

ಏಕೋತ್ತರ ಶತಸ್ಥಲವನ್ನು ಅಂಗಷಟ್ಸ್ಥಲ ಮತ್ತು ಲಿಂಗಷಟ್ಸ್ಥಲ ಎಂದುವಿಭಾಗ ಮಾಡಿ

೧. ಲಿಂಗ ಸ್ಥಲದಲ್ಲಿ : ೧ ಭಕ್ತ ಸ್ತಲದಲ್ಲಿ ಪಿಂಡ ಸ್ಥಲ, ಪಿಂಡಜ್ಞಾನ ಸ್ಥಲ, ಸಂಸಾರ ಹೇಯ ಸ್ಥಲ, ಗುರು ಕಾರುಣ್ಯಸ್ಥಲ, ಲಿಂಗಧಾರಣ ಸ್ಥಲ, ವಿಭೂತಿ ಸ್ಥಲ, ರುದ್ರಾಕ್ಷಿ ಸ್ಥಲ, ಪಂಚಾಕ್ಷರಿಯ ಸ್ಥಲ, ಭಕ್ತಿ ಸ್ಥಲ, ಉಭಯ ಸ್ಥಲ, ತ್ರಿವಿಧ ಸಂಪತ್ತ ಸ್ಥಲ, ಚತುರ್ವಿಧಸಾರಾಯಸ್ಥಲ, ಉಪಾದಿ ಮಾಟ ಸ್ಥಲ, ನಿರೂಪಾದಿ ಸ್ಥಲ, ಸಹಸಮಾಟ ಸ್ಥಲಗಳಿವೆ ಒಟ್ಟು ೧೫ ಸ್ಥಲಗಳಿವೆ.

ಮಾಹೇಶ್ವರ ಸ್ಥಲ : ಮಾಹೇಶ್ವರ ಸ್ಥಲ ಲಿಂಗಾನಿಷ್ಠಾಸ್ಯಸ್ಥಲ, ಪೂರ್ವಾಶ್ರಯನಿರಸನ ಸ್ಥಲ, ವಾಗದ್ವೈರ ನಿರಸಸ್ಥಲ, ಆಹ್ವಾನ ನಿರಸನ ಸ್ಥಲ, ಅಷ್ಟತನು ಮೂರ್ತಿ ಸ್ಥಲ, ಸರ್ವ ಗತ ನಿರಸನ ಸ್ಥಲ, ಶಿವಜಗಸ್ಮಯಸ್ಥಲ, ಭಕ್ತ ದೇಹಿಸ್ಥಲ, ಗಳಿವೆ. ಒಟ್ಟು ೯ ಸ್ಥಲಗಳಿವೆ.

ಪ್ರಸಾದಿ ಸ್ಥಲದಲ್ಲಿ : ಪ್ರಸಾದಿಸ್ಥಲ, ಗುರುಮಹಾತ್ಮೆಯ ಸ್ಥಲ, ಲಿಂಗ ಮಹಾತ್ಮೆ ಸ್ಥಲ, ಜಂಗಮ ಮಹಾತ್ಮೆ ಸ್ಥಲ, ಭಕ್ತ ಮಹಾತ್ಮೆ ಸ್ಥಲ, ಶರಣ ಮಹಾತ್ಮೆ ಸ್ಥಲ, ಪ್ರಸಾದ ಮಹಾತ್ಮೆ ಸ್ಥಲಗಳಿವೆ ಒಟ್ಟು ೭ ಸ್ಥಲಗಳಿವೆ.

ಪ್ರಾಣ ಲಿಂಗ ಸ್ಥಲದಲ್ಲಿ : ಪ್ರಾಣ ಲಿಂಗ ಸ್ಥಲ, ಪ್ರಾಣಲಿಂಗಾರ್ಚನೆ ಸ್ಥಲ, ಶಿವಯೋಗ ಸಮಾಧಿ ಸ್ಥಲ, ಲಿಂಗ ನಿಜ ಸ್ಥಲ, ಅಂಗಲಿಂಗ ಸ್ಥಲಗಳಿವೆ ಒಟ್ಟು ೫ ಸ್ಥಲಗಳಿವೆ.

ಶರಣ ಸ್ಥಲದಲ್ಲಿ : ಶರಣ ಸ್ಥಲ, ತಾಮಸ ನಿರಸನ ಸ್ಥಲ, ನಿರ್ದೇಶ ಸ್ಥಲ, ಶೀಲ ಸಂಪಾದನೆಯ ಸ್ಥಲಗಳಿವೆ ಒಟ್ಟು ೪ ಸ್ಥಲಗಳಿವೆ.

ಐಕ್ಯ ಸ್ಥಲದಲ್ಲಿ : ಐಕ್ಯ ಸ್ಥಲ, ಸರ್ವಾಚಾರ ಸಂಪತ್ತು ಸ್ಥಲ, ಏಕಭಾಜನ ಸ್ಥಲ, ಸಹಭೋಜನ ಸ್ಥಲ ಒಟ್ಟು ೪ ಸ್ಥಲಗಳು ಹೀಗೆ ಅಂಗಸ್ಥಲಗಳಲ್ಲಿ ೪೪ ಅಂಗ ಷಟ್ಸ್ಥಲಗಳಿವೆ.

ಎರಡನೆಯ ವಿಭಾಗವಾಗಿರುವ ಲಿಂಗಸ್ಥಲದಲ್ಲಿ ಅಚಾರಲಿಂಗದಲ್ಲಿ ದೀಕ್ಷಾಗುರುಸ್ಥಲ, ಶಿಕ್ಷಾ ಗುರುಸ್ಥಲ, ಜ್ಞಾನ ಗುರು ಸ್ಥಲ, ಕ್ರಿಯಾಲಿಂಗಸ್ಥಲ, ಭಾವಲಿಂಗ ಸ್ಥಲ, ಜ್ಞಾನಲಿಂಗಸ್ಥಲ, ಸ್ವಯಂಸ್ಥಲ, ಚರಸ್ಥಲ, ಪರಸ್ಥಲಗಳಿವೆ. ಒಟ್ಟು ೯ ಸ್ಥಲಗಳಿವೆ.

ಗುರುಲಿಂಗ ಸ್ಥಲದಲ್ಲಿ : ಕ್ರಿಯಾಗಮಸ್ಥಲ, ಭಾವಾಗಮಸ್ಥಲ, ಜ್ಞಾನಾಗಮಸ್ಥಲ, ಸಕಾಯಸ್ಥಲ, ಅಕಾಯಸ್ಥಲ, ಪರಕಾಯಸ್ಥಲ, ಧರ್ಮಾಚಾರಸ್ಥಲ, ಭಾವಚಾರಸ್ಥಲ, ಜ್ಞಾನಾಚಾರಸ್ಥಲಗಳಿವೆ. ಒಟ್ಟು ೯ ಸ್ಥಲಗಳಿವೆ.

ಶಿವಲಿಂಗ ಸ್ಥಲದಲ್ಲಿ : ಕಾಯಾನುಗ್ರಹಸ್ಥಲ, ಇಂದ್ರಿಯಾನುಗ್ರಹಸ್ಥಲ, ಪ್ರಾಣಾನುಗ್ರಹ ಸ್ಥಲ, ಕಾಯಾರ್ಪಿತ ಸ್ಥಲ, ಕರುಣಾರ್ಪಿತಸ್ಥಲ, ಭಾವಾರ್ಪಿತ ಸ್ಥಲ, ಶಿಷ್ಯಸ್ಥಲ, ಶೂಶ್ರೂಷಾಸ್ಥಲ, ಸೇವ್ಯಸ್ಥಲ ಗಳಿವೆ ಒಟ್ಟು ೯ ಸ್ಥಲಗಳಿವೆ.

ಜಂಗಮಲಿಂಗಸ್ಥಲದಲ್ಲಿ : ಜೀವಾತ್ಮ ಸ್ಥಲ, ಅಂತರಾತ್ಮಸ್ಥಲ, ಪರಮಾತ್ಮ ಸ್ಥಲ, ನಿರ್ದೇಹಾಗಮಸ್ಥಲ, ನಿರ್ಭಾವಾಗಾಮಸ್ಥಲ, ನಷ್ಟಾಗಮಸ್ಥಲ, ಆದಿ ಪ್ರಸಾದಿಸ್ಥಲ, ಅಂತ್ಯ ಪ್ರಸಾದಿಸ್ಥಲ, ಸೇವ್ಯಪ್ರಸಾದಿಸ್ಥಲಗಳಿವೆ – ೯ ಸ್ಥಲಗಳಿವೆ.

ಪ್ರಸಾದ ಲಿಂಗಸ್ಥಲದಲ್ಲಿ : ದೀಕ್ಷಾ ಪದೋದಕಸ್ಥಲ, ಶಿಕ್ಷಾಪಾದೋದಕಸ್ಥಲ, ಜ್ಞಾನ ಪಾದೋದಕಸ್ಥಲ, ಕ್ರಿಯಾನಿಷ್ಪತ್ತಿಸ್ಥಲ, ಭಾವನಿಷ್ಪತ್ತಿಸ್ಥಲ, ಜ್ಞಾನ ನಿಷ್ಪತ್ತಿಸ್ಥಲ, ಪಿಂಡಾಕಾಶಸ್ಥಲ, ಬಿಂದ್ವಾಕಾಶಸ್ಥಲ, ಮಹದಾಕಾಶಸ್ಥಲ, ೯ ಸ್ಥಲಗಳನ್ನು ಒಳಗೊಂಡಿದೆ.

ಮಹಾಲಿಂಗಸ್ಥಲದಲ್ಲಿ : ಕ್ರಿಯಾ ಪ್ರಕಾಶಸ್ಥಲ, ಭಾವ ಪ್ರಕಾಶ ಸ್ಥಲ, ಜ್ಞಾನ ಪ್ರಕಾಶ ಸ್ಥಲ, ಕೊಂಡುದು ಪ್ರಕಾಶಸ್ಥಲ, ನಿಂದುದೋಗರ ಸ್ಥಲ, ಚರಾಚರಾನಾಸ್ತಿಸ್ಥಲ, ಭಾಂಡಸ್ತಲ, ಭಾಜನಸ್ಥಲ, ಅಂಗಲೇಪನಸ್ಥಲ, ಸ್ವಯ ಪರಿವರಿಯದಸ್ಥಲ, ಭಾವಭಾಚನಷ್ಟಸ್ಥಲ, ಜ್ಞಾನ ಶೂನ್ಯ ಸ್ಥಲಗಳಿವೆ. ಇವುಗಳಲ್ಲಿ ೧೨ ಸ್ಥಲಗಳು ಹೀಗೆ ಒಟ್ಟು ಲಿಂಗಸ್ಥಲಗಳು ೫೨.

ಈ ೪೪ ಸ್ಥಲ ಅಂಗಷಟ್ಸಲ + ೫೨ ಲಿಂಗ ಷಟ್ಥಲ ೧೦೧ ಸ್ಥಲಗಳ ಪ್ರತಿಪಾದನೆಯೇ ನೂರೊಂದು ಸ್ಥಲ ಅಥವಾ ಏಕೋತ್ತರ ಶತ ಸ್ಥಲ ಸಿದ್ಧಾಂತವಾಗಿದೆ.

ಏಕೋತ್ತರ ಶತಸ್ಥಲ ಪರಿಕಲ್ಪನೆಯನ್ನು ತಿಳಿಯಪಡಿಸುತ್ತ ನೂರೊಂದು ಸ್ಥಲದ ವಿಚಾರವು ೧೨ ನೆಯ ಶತಮಾನದ ಅನಂತರ ಬಂದುದೆಂದು ಹೇಳುವ ಡಾ. ಎಸ್.ಸಿ. ನಂದಿಮಠರು ಅಭಿಪ್ರಾಯ ತಿಳಿಸಿದ್ದಾರೆ.

ಏಕೋತ್ತರಶತಸ್ಥಲ ಕೃತಿಯ ಕರ್ತೃವಿನ ವಿಚಾರವನ್ನು ವಿವರವಾಗಿ ಚರ್ಚೆ ಮೂಲಕ ೧೫ ನೆಯ ಶತಮಾನದ 'ಭಂಡಾರಿ ಜಕ್ಕಣ್ಣ' ಈ ಕೃತಿಯ ಕರ್ತೃವೆಂದು ತಿಳಿಸಿದ್ದಾರೆ. ಜಕ್ಕಣನ ಕಾಲವು ೧೪೩೦ ಎಂದು ಹೇಳಿ ಕೃತಿಯು ೧೪೧೨ ಈ ಕೃತಿಯ ನಿರ್ದಿಷ್ಟ ಕಾಲವೆಂದು ಸ್ಪಷ್ಟಪಡಿಸಿದ್ದಾರೆ.

ಡಾ. ಎಂ. ಎಂ. ಕಲಬುರ್ಗಿಯವರು ಈ ವಚನ ಸಂಪಾದನೆಯ ಕೃತಿಯ ರಚನೆಗೆ ಮೂಲ ಪ್ರತಿಯು ಅತೀ ಸನಿಹದ ತಾಳೆ ಗ್ರಂಥವನ್ನು ಬಳಸಿದ್ದೇವೆ ಎಂದು ಹೇಳಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಹಸ್ತ ಪ್ರತಿ ಭಂಡಾರಕ್ಕೆ (ಕೆ ೨೧೬) ಸಂಬಂಧಿಸಿದ ಕೃತಿಯೆಂದು ದೃಢಪಡಿಸಿದ್ದಾರೆ.

# ಅಧ್ಯಾಯ - ಐದು

# ವಚನ ಸಾಹಿತ್ಯ ಸಂಪಾದನೆಗೆ ಡಾ. ಎಂ.ಎಂ. ಕಲಬುರ್ಗಿಯವರ ಕೊಡುಗೆ

* ಡಾ. ಕಲಬುರ್ಗಿಯವರ ಯೋಜನೆಗಳು
* ಸಮಗ್ರ ವಚನ ಸಾಹಿತ್ಯದ ಜನಪ್ರೀಯ ಆವೃತ್ತಿ (ಬೈಬಲ್ ಮಾದರಿ)

# ಅಧ್ಯಾಯ : ಐದು

# ವಚನ ಸಾಹಿತ್ಯ ಸಂಪಾದನೆಗೆ ಡಾ. ಎಂ.ಎಂ.ಕಲಬುರ್ಗಿಯವರ ಕೊಡುಗೆ

ಡಾ. ಎಂ.ಎಂ. ಕಲಬುರ್ಗಿಯವರು ಅತ್ಯಂತ ಅಚ್ಚು ಮೆಚ್ಚಿನ ಕ್ಷೇತ್ರ ವಚನ ಸಾಹಿತ್ಯ ವಚನಗಳ ಹಸ್ತ ಪ್ರತಿಗಳನ್ನು ಸಂಗ್ರಹಿಸುವುದು ಅವುಗಳನ್ನು ಪರಿಷ್ಕರಿಸುವಲ್ಲಿ ವಚನಕಾರರ ಅಂಕಿತಗಳ ಆಧಾರದ ಮೇಲೆ ವಿಂಗಡಿಸಿ ಒಬ್ಬೊಬ್ಬ ವಚನಕಾರರ ವಚನಗಳನ್ನು ಕೂಡಿ ಹಾಕುವುದರೊಂದಿಗೆ ವಚನಕಾರನೊಬ್ಬ ಸಿಗುವ ಹಸ್ತ ಪ್ರತಿಗಳನ್ನು ಸೂಚಿ ರೂಪದಲ್ಲಿ ತಯಾರಿಸುವುದು ಅವುಗಳಿಗೆ ಶುದ್ಧ ಪಾಠವನ್ನು ಶೋಧಿಸುವುದು ಹೆಚ್ಚು ಹಸ್ತ ಪ್ರತಿಗಳಿಗೆ ಬದಲಾಗಿ ಶುದ್ಧ ಪಾಠದ ಒಂದೇ ಹಸ್ತ ಪ್ರತಿಯನ್ನು ಇಟ್ಟುಕೊಂಡು 'ವಚನ ಸಂಪಾದನೆ'ಯನ್ನು ಮುಂದುವರೆಸುವುದು.

ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಡಾ. ಎಂ.ಎಂ. ಕಲಬುರ್ಗಿಯವರು ವಚನ ಸಂಶೋಧನೆಗೆ ತೊಡಗಿಕೊಂಡಿದ್ದು ೧೯೬೨ ರಲ್ಲಿ ಎಂ.ಎ. ಪದವಿ ಮುಗಿದ ಕೂಡಲೇ ಅವರು ಡಾ. ಆರ್.ಸಿ. ಹಿರೇಮಠರ ಪ್ರಮುಖ ಸಂಪಾದಕತ್ವದಲ್ಲಿ ಸಾಗಿದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಆರಂಭಗೊಂಡಿದ್ದ "ಸಮಗ್ರ ವಚನ ವಾಙ್ಮಯ ಸಂಶೋಧನ –ಸಂಸ್ಕರಣ– ಪ್ರಕಟಣ ಯೋಜನೆಯಲ್ಲಿ ಸಹಾಯಕ ಸಂಶೋಧಕರಾಗಿ ಸೇರಿಕೊಂಡರು. ಆಲ್ಲಿ ಒಂದು ವರ್ಷದ ಕಾಲ ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಸ್ತ ಪ್ರತಿ ಸಂಗ್ರಹ ಸೂಚೀಕರಣ, ವಚನಗಳ ನಕುಲ –ಪರಿಷ್ಕರಣ ಇತ್ಯಾದಿ ಕಾರ್ಯಗಳಲ್ಲಿ ತೊಡಗಿಕೊಂಡರು. ಈ ಯೋಜನೆಯ ಮೊದಲ ಕೃತಿಯಾಗಿ "ಚನ್ನಬಸವಣ್ಣನವರ ವಚನಗಳು" ಸಮಗ್ರ ಸಂಪುಟ ಪ್ರಕಟವಾಗುವಲ್ಲಿ ಅತ್ಯಂತ ಶಿಸ್ತು, ಶ್ರದ್ಧೆ, ಪರಿಶ್ರಮ ವಹಿಸಿದರು. ಇದಾದನಂತರ ಡಾ. ಎಂ.ಎಂ. ಕಲಬುರ್ಗಿಯವರು ಅವರು ಮತ್ತೆ ವಚನ ಸಾಹಿತ್ಯದ ಕಡೆಗೆ ಮರಳಿ ಬಂದದ್ದು ೧೯೮೦ ರಲ್ಲಿ ಶ್ರೀ ಬಸವೇಶ್ವರ ಪೀಠದ ಪ್ರಾಧ್ಯಾಪಕರಾದಾಗ ಅಲ್ಲಿಂದ ಮುಂದೆ ತಮ್ಮ

ಜೀವನಾದ್ಯಂತವಾಗಿ ವಚನ ಸಾಹಿತ್ಯದ ಸಂಶೋಧನೆ, ಪರಿಷ್ಕರಣೆ, ಪ್ರಕಟಣೆ ಮತ್ತು ಪ್ರಸಾರ ಕಾರ್ಯವನ್ನು ತಮ್ಮ ಬದುಕಿನ ಮುಖ್ಯ ಎದುರಿಸಿ ಸ್ವೀಕರಿಸಿದರು. ಡಾ. ಎಂ.ಎಂ. ಕಲಬುರ್ಗಿಯವರು ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಮಾಡಿದ ಒಟ್ಟು ಮೂರು ಕಾರ್ಯಗಳನ್ನು ಡಾ. ವೀರಣ್ಣ ರಾಜೂರ ಅವರು ಮೂರು ನೆಲೆಗಳಲ್ಲಿ ಗುರುತಿಸಿದ್ದಾರೆ.

೧. ವಚನ ಗ್ರಂಥ ಪರಿಷ್ಕರಣೆ – ಪ್ರಕಟಣೆ

೨. ವಚನ ಗ್ರಂಥ ಪ್ರಕಟಣೆ ನಿರ್ದೇಶನ

೩. ವಚನ ಸಾಹಿತ್ಯ ಆಧಾರಿತ ಲೇಖನ ರಚನೆ

ಡಾ. ಎಂ.ಎಂ. ಕಲಬುರ್ಗಿಯವರು ವಚನ ಸಾಹಿತ್ಯದ ಅಧ್ಯಯನದ ವ್ಯಾಪ್ತಿ ತುಂಬಾ ವಿಸ್ತಾರವಾದುದು. ವಚನ ಸಾಹಿತ್ಯದ ಪ್ರಾರಂಭಿಕ ಆಧ್ಯಯನದಿಂದ ಅವರು 'ವಚನ ' ಪದದ ಸ್ವರೂಪ ಲಕ್ಷಣ ಅರ್ಥ ಆಶಯ, ನಿರ್ವಚನದಿಂದ ಪ್ರಾರಂಭವಾಗಿ ಅದರ ಸಂಗ್ರಹ ಸಂಕಲನ ಸಂಪಾದನೆ ಪರಿಷ್ಕರಣೆ ವಿಶ್ಲೇಷಣೆ, ವಿವೇಚನೆ ಮೌಲ್ಯಮಾಪನ , ಪ್ರಕಟಣೆ , ಪ್ರಸಾರ ಕಾರ್ಯದವರೆಗೆ ಮುಂದುವರೆದು ಕೊಂಡಿತ್ತು.

"ವಚನ" ಶಬ್ದಕ್ಕೆ ಡಾ. ಎಂ.ಎಂ. ಕಲಬುರ್ಗಿಯವರು ನೀಡಿದ ಅರ್ಥ ವಿವರಣೆ ಅತ್ಯಂತ ಮೌಲಿಕವಾದುದು. "ವಚನ" ಶಬ್ದಕ್ಕೆ ಇಲ್ಲಿ ಗದ್ಯ ಸಾಹಿತ್ಯ ಪ್ರಕಾರವೆಂದು ಅರ್ಥವಲ್ಲ. ಪ್ರತಿಜ್ಞೆ, ಆತ್ಮ ಸಾಕ್ಷಿಯ ಮಾತು ಎಂದು ಅರ್ಥ ನಡೆ ಹೇಗೆ ಇರಲಿ, ನುಡಿ ಮಾತ್ರ ಕಲಾತ್ಮಕವಾದುದು "ರಚನೆ" ಯಾದರೆ ನಡೆದಂತೆ ನುಡಿದ ಆತ್ಮ ಸಾಕ್ಷಿಯ ವಾಣಿ ವಚನವೆನಿಸುತ್ತದೆ.

"ವಚನಗಳು ಆಚಾರ್ಯರ ಸಾಹಿತ್ಯವಲ್ಲ, ಅನುಭಾವಿಗಳ ಸಾಹಿತ್ಯ ಕಾಯಿ ಸಾಹಿತ್ಯವಲ್ಲ , ಆತ್ಮ ಸಾಹಿತ್ಯ"

"ವಚನವೆನ್ನುವುದು ಕನ್ನಡ ಸಂದರ್ಭದಲ್ಲಿ ಕೇವಲ ಒಂದು ಸಾಹಿತ್ಯ ಪ್ರಕಾರವಲ್ಲ ಒಂದು ಸಾಂಸ್ಕೃತಿಕ ಪರಂಪರೆ ಸಾಹಿತ್ಯ ಪ್ರಕಾರ ಕಾಲಮಿತಿಯುಳ್ಳದ್ದಾಗಿರುತ್ತದೆ. ಪರಂಪರೆ ಕಾಲತೀತ ವಾಗಿರುತ್ತದೆ. ಪ್ರಕಾರದ ಹಿಂದೆ ಒಂದು ನಿರ್ದಿಷ್ಟ ಧೋರಣೆಯಿದ್ದು ಪೂರ್ಣಗೊಳ್ಳುತ್ತಲೇ ಅದು ಸ್ಥಗಿತವಾಗುತ್ತದೆ. ಪರಂಪರೆ ಮಾತ್ರ ಎಲ್ಲ ಧೋರಣೆಗೆ ಮೈ ಒಡ್ಡಿಕೊಳ್ಳುತ್ತ ಚಲಿಸುವ ಲಕ್ಷಣ ಹೊಂದಿರುತ್ತದೆ. ವಚನ ಕೇವಲ ಪ್ರಕಾರವಾಗಿ ಉಳಿಯದೆ ಚಲನಶೀಲ ಪರಂಪರೆಯಾಗಿ ಬೆಳೆಯಲು ಕಾರಣ ಶರಣರು "ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ" ಎಂಬ ಮುಕ್ತ ಧೋರಣೆಯಾಗಿರುವ ಈ ಕಾರಣದಿಂದಾಗಿ ಸ್ಥಾವರ ಪ್ರಜ್ಞೆಯ ಕನ್ನಡದ ಬೇರೆ ಸಾಹಿತ್ಯ ಪ್ರಕಾರಗಳು ಅಂದಂದೇ ಸ್ಥಗಿತವಾದರೂ ಜಂಗಮ ಪ್ರಜ್ಞೆಯ ವಚನ ಪ್ರಕಾರ ಮಾತ್ರ ಈಗಲೂ ಸೃಷ್ಟಿಯಾಗುತ್ತಲಿವೆ.

* ವಚನ ಸಾಹಿತ್ಯಕ್ಕೆ ಸಂಬಂಧಪಟ್ಟ ಮಠ ಮಾನ್ಯಗಳಲ್ಲಿ ಮನೆತನಗಳಲ್ಲಿ ಜನಸಾಮಾನ್ಯರಲ್ಲಿದ್ದ ವಚನಗಳ ಹಸ್ತಪ್ರತಿಗಳನ್ನು ಒಂದು ಕಡೆಯಲ್ಲಿ ಸಂಗ್ರಹಿಸಿ ವಚನ ಸಾಹಿತ್ಯ ಭಂಡಾರದ ಹಸ್ತಪ್ರತಿ ವಿಭಾಗವನ್ನು ಸ್ಥಾಪನೆ ಮಾಡಿದರು.

* ವಚನ ಸಾಹಿತ್ಯಕ್ಕೆ ಸಂಬಂಧಿಸಿದ ಪ್ರಾಚೀನ ಆಕರ ಕೋಶವನ್ನು ಪರಿಷ್ಕರಿಸಿ ಪ್ರಕಟಣೆಗೊಳಿಸಿದರು.

* ಎಲ್ಲ ವಚನಕಾರರ ವಚನಾಗ್ರಂಥಗಳನ್ನು ಒಂದು ಕೂಡಿ ಹಾಕಿ ವಚನ ಹಸ್ತ ಪ್ರತಿಗಳ ಗ್ರಂಥ ಸೂಚಿಗಳನ್ನು ಪ್ರಕಟಗೊಳಿಸಿದರು.

* ಎಲ್ಲ ವಚನಕಾರರ ವಚನಗಳನ್ನು ಸಂಗ್ರಹಿಸಿ ಅವರವರ ಅಂಕಿತಗಳ ಆಧಾರದ ಮೇಲೆ ಒಬ್ಬೊಬ್ಬ ವಚನಕಾರರ ಹೆಸರಿನಲ್ಲಿ ದೊರೆಯುವ ಹಸ್ತಪ್ರತಿಗಳನ್ನು ಸಂಗ್ರಹಿಸುವುದು.

* ವಚನ ಸಂಪಾದನೆಯ ಗ್ರಂಥಗಳಿಗೆ ಸಂಬಂಧಿಸಿದಂತೆ ವಚನಕಾರರ ಜೀವನ ಚರಿತ್ರೆ ವಚನಗಳ ಪಾಠ ಪರಿಷ್ಕರಣದಲ್ಲಿ ಬಳಸಿದ ವಿಧಾನಗಳಲ್ಲಿ ವಿವರಣಾತ್ಮಕವಾಗಿ ಪ್ರಸ್ತಾವನೆಗಳಲ್ಲಿ ತಿಳಿಸಿಕೊಡುವುದು.

* ವಚನ ಸಾಹಿತ್ಯದ ಹಸ್ತ ಪ್ರತಿ, ಸಂಗ್ರಹ, ಸಂರಕ್ಷಣೆ, ಪ್ರಕಟಣೆ ಮಾಡಿ ಈ ವಚನ ಸಾಹಿತ್ಯವನ್ನು ಸಾಮಾನ್ಯ ಜನರಿಗೂ ತಲುಪುವಂತೆ ವಚನ ಸಾಹಿತ್ಯ ಪ್ರಕಟಣೆಯ ಯೋಜನೆಯನ್ನು ಹಾಕಿಕೊಂಡ ಬೇರೆ ಬೇರೆ ಮಠ ಮಾನ್ಯಗಳಲ್ಲಿ ವಚನ ಸಂಪಾದನೆಯ ಗ್ರಂಥಗಳನ್ನು ಪ್ರಕಟಿಸುವುದು.

* ವಚನ ಸಾಹಿತ್ಯ ಸಂಪಾದನೆಯ ಮೂಲಕ ಹಲವಾರು ಯುವಜನರ ಸಂಶೋಧಕರನ್ನು ತಯಾರಿಮಾಡಿ ವಚನ ಸಾಹಿತ್ಯದಲ್ಲಿ ಅಧ್ಯಯನ ಕೈಗೊಳ್ಳುವಂತೆ ಮಾರ್ಗದರ್ಶನ ಮಾಡುವುದು.

* ವಚನ ಸಾಹಿತ್ಯ ಪರಿಷ್ಕರಣ ಕಾರ್ಯವನ್ನು ಸಾಂಘಿಕ ಪ್ರಯತ್ನವನ್ನಾಗಿಸಿರುವುದರಿಂದ ಗದುಗಿನ ಜಗದ್ಗುರು ತೋಂಟದಾರ್ಯ ಮಠದ ಲಿಂಗಾಯಿತ ಅಧ್ಯಯನ ಸಂಸ್ಥೆಯಿಂದ ವಚನ ಸಂಪುಟಗಳು ಪ್ರಕಟಗೊಂಡು ಬಿಡುಗಡೆಗೊಂಡುದುದು ಐತಿಹಾಸಿಕ ದಾಖಲೆ.

* ವಿಶ್ವವಿದ್ಯಾಲಯ ಮಟ್ಟದಲ್ಲಿ 'ವಚನ ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸಿ ಅವುಗಳ ಮೂಲಕ ವಚನ ಸಾಹಿತ್ಯವನ್ನು ಕುರಿತಾದ ಗ್ರಂಥ ಪ್ರಕಟಣೆ, ಸಂಶೋಧನೆ ವಿಚಾರ ಸಂಕೀರಣಗಳನ್ನು ಹಮ್ಮಿಕೊಳ್ಳುವಂತೆ ಮಾಡಿದುದು.

* ವಚನ ಸಾಹಿತ್ಯ ಅಧ್ಯಯನಕ್ಕೆ ಸಂಬಂಧಿಸಿದಂತೆ 'ವಚನ ಪದ" ಎಂಬ ಹೆಸರಿನಲ್ಲಿ ಗ್ರಂಥ ಬಿಡುಗಡೆಗೊಳಿಸುವುದು.

* ಡಾ. ಕಲಬುರ್ಗಿಯವರು ವಚನ ಸಾಹಿತ್ಯದ ಸಂಪಟುಗಳನ್ನು ಬೈಬಲ್ ಮಾದರಿಯಲ್ಲಿ ಸಂಪಾದನೆ ಮುಗಿಸಿ ಅದನ್ನು ಪ್ರಕಟಗೊಳಿಸಲು ಅಣಿ ಮಾಡಿದರು.

* ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಕನ್ನಡ ಪುಸ್ತಕ ಪ್ರಾಧಿಕಾರದ ಮೂಲಕ ವಚನ ಸಾಹಿತ್ಯದ ಸಂಪುಟಗಳನ್ನು ಬಿಡುಗಡೆಗೊಳಿಸಿದುದು.

* ವಚನಗಳ ಮುದ್ರಣ ಶೈಲಿಯಲ್ಲಿ ವಚನಗಳನ್ನು ಅರ್ಥವಾಗುವ ರೀತಿಯಲ್ಲಿ ವಚನಗಳ ವ್ಯಾಖ್ಯಾನಗೊಳಿಸುವುದು.

* ವಚನ ಸಾಹಿತ್ಯವನ್ನು ಕುರಿತಾದ ರಾಜ್ಯಮಟ್ಟದ , ರಾಷ್ಟ್ರಮಟ್ಟದ ಕಾರ್ಯಗಾರ, ವಿಚಾರ ಸಂಕೀರಣ , ಪುಸ್ತಕ ಪ್ರಕಟಣೆ ನಾಟಕ,ಪ್ರಯೋಗಗಳ ಮೂಲಕ ಕನ್ನಡ ಭಾಷೆಯ ಮೂಲಕ ಶರಣರ ಸಂದೇಶಗಳನ್ನು ಜನತೆ ತಲುಪಿಸುವಲ್ಲಿ ಡಾ. ಕಲಬುರ್ಗಿಯವರ ಕೊಡುಗೆ ಅಪಾರವಾದುದು.

* ಭಾರತೀಯ ಬಹುಭಾಷೆಗಳಲ್ಲಿ ವಚನಗಳನ್ನು ಅನುವಾದಿಸಿ ಅವುಗಳನ್ನು ಪ್ರಕಟಣೆಗೊಳಿಸುವಂತೆ ಸರಕಾರಕ್ಕೆ ಮಾರ್ಗದರ್ಶನ ನೀಡಿದುದು.

## ಡಾ. ಎಂ.ಎಂ. ಕಲಬುರ್ಗಿಯವರ ಯೋಜನೆಗಳು

ಆಧುನಿಕ ಕರ್ನಾಟಕದ ಸಾಂಸ್ಕೃತಿಕ ಅಭಿವೃದ್ಧಿಯ ಹಲವಾರು ಕಾರ್ಯ ಯೋಜನೆಗೆ ಕಲಬುರ್ಗಿಯವರ ಸಂಘಟನಾ ಶಕ್ತಿ ಅತ್ಯಂತ ಕ್ರಿಯಾಶೀಲವಾಗಿ ಕಾರ್ಯವನ್ನು ಮೂಡಿದೆ. ವಚನ ಸಂಗ್ರಹ ಯೋಜನೆಯಲ್ಲಿ "ಡಾ. ಫ.ಗು. ಹಳಕಟ್ಟಿಯವರು ಗೋಳಗುಮ್ಮಟವಾದರೆ , ಡಾ. ಎಂ.ಎಂ. ಕಲಬುರ್ಗಿಯವರು ತಾಜಮಹಲು" ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಡಾ. ಆರ್.ಸಿ. ಹಿರೇಮಠ ಅವರ ಸಮರ್ಥ ಮಾರ್ಗದರ್ಶನದಲ್ಲಿ "ಸಮಗ್ರ ವಚನ ವಾಙ್ಮಯ ಸಂಶೋಧನಾ ಸಂಸ್ಕರಣ ಪ್ರಕಟಣ ಯೋಜನೆಯ ಮೂಲಕ ಸಹಾಯಕ ಸಂಶೋಧಕರಾಗಿ ಕೆಲಸವನ್ನು ಪೂರೈಸಿದುದರ ಅಪಾರವಾದ ಅನುಭವವು ಅವರ ಜೀವಿತದ ಕೊನೆಯ ಉಸಿರು ಇರುವವರೆಗೂ ವರುಷದಿಂದ ವರುಷಕ್ಕೆ ಅದಕ್ಕೊಂದು ವಿಶೇಷವಾದ ರೂಪವನ್ನು ನೀಡುತ್ತ ಬಂದುದರ ಪರಿಣಾಮವಾಗಿ ಅನೇಕ ಸಾಂಘಿಕ ಸಂಸ್ಥೆಗಳ ಮೂಲಕ ಹಲವಾರು ಯೋಜನೆಗಳು ರೂಪುಗೊಂಡವು.

## ಜಗದ್ಗುರು ತೋಂಟದಾರ್ಯ ಮಠದ ಲಿಂಗಾಯತ ಅಧ್ಯಯನ ಸಂಸ್ಥೆ ಗದಗ :

೧೯೭೪ ರಲ್ಲಿ ಗದುಗಿನ ತೋಂಟದಾರ್ಯಮಠಕ್ಕೆ ನೂತನ ಪೀಠಾಧಿಕಾರಿಗಳಾಗಿ ಬಂದ ತೋಂಟದ ಸಿದ್ದಲಿಂಗ ಮಹಾಸ್ವಾಮಿಗಳವರು ಡಾ. ಎಂ.ಎಂ. ಕಲಬುರ್ಗಿಯವರ ಮಾರ್ಗದರ್ಶನದಲ್ಲಿ ೧೯೭೫ ರಲ್ಲಿ ವೀರಶೈವ ಲಿಂಗಾಯತ ಅಧ್ಯಯನ ಸಂಸ್ಥೆಯನ್ನು ಸ್ಥಾಪನೆಗೈದರು. ಈ ಸಂಸ್ಥೆಯ ಅಡಿಯಲ್ಲಿ "ವಚನ ಸಾಹಿತ್ಯ" , "ಸ್ವರ ವಚನ ಸಾಹಿತ್ಯ" ಮಹಾಪ್ರಬಂಧ ಸಾಹಿತ್ಯ" "ಅಭಿನಂದನ ಸಾಹಿತ್ಯ", "ಪುರಾತನ ಸಾಹಿತ್ಯ ರತ್ನ ಮಾಲೆ", "ನೂತನ ಸಾಹಿತ್ಯ ರತ್ನ ಮಾಲೆ" , "ಅನುವಾದ ಸಾಹಿತ್ಯ ಮಾಲೆ", "ಗ್ರಾಮೀಣ ಸಾಹಿತ್ಯ", "ವೀರಶೈವ ಪುಣ್ಯ ಪುರುಷ ಸಾಹಿತ್ಯ ಮಾಲೆ" , "ಲಿಂಗಾಯತ ಪುಣ್ಯ ಪುರುಷರ ಸಾಹಿತ್ಯ ಮಾಲೆ" , "ಲಿಂಗಾಯತ ಪುಣ್ಯ ಪುರುಷ ಸಂಪಟುಗಳು" ಎಂಬ ಶಿರ್ಷಿಕೆಗಳ ಯೋಜನೆಯಲ್ಲಿ ಸುಮಾರು ೪೦೦ ಪುಸ್ತಕಗಳಲ್ಲಿ ೧೦೦ಪುಸ್ತಕಗಳಿಗಿಂತಲೂ ಅಧಿಕವಾದ ಪುಸ್ತಕಗಳಿಗೆ ಪ್ರಕಾಶಕರ ನುಡಿಯನ್ನು ಬರೆಯುವುದರೊಂದಿಗೆ ಅನೇಕ ಸಂಶೋಧನಾ ಗ್ರಂಥಗಳ ಪ್ರಕಟಣೆಗೆ ಮಾರ್ಗದರ್ಶನವು ಡಾ. ಎಂ.ಎಂ. ಕಲಬುರ್ಗಿಯವರಿಂದ ನಡೆಯುತ್ತಲೇ ಇರುತ್ತಿತ್ತು. ತೋಂಟದ ಸಿದ್ದಲಿಂಗೇಶ್ವರ ಸಮಗ್ರ ಸಾಹಿತ್ಯ ೧೦ ಸಂಪುಟಗಳನ್ನು ಕರ್ನಾಟಕ ಧಾರ್ಮಿಕ ದತ್ತಿ ಇಲಾಖೆ ಶ್ರೀ ಸಿದ್ದಲಿಂಗೇಶ್ವರ ಸ್ವಾಮಿ ಕ್ಷೇತ್ರ ಎಡೆಯೂರು ಇಲ್ಲಿಂದ ೨೦೦೫ ರಲ್ಲಿ ಡಾ. ಎಂ.ಎಂ. ಕಲಬುರ್ಗಿಯವರ ನಿರ್ದೇಶನದಲ್ಲಿ ಪ್ರಕಟಗೊಂಡವು.

ಪೀಠಾರೋಹಣ ರಜತ ಸಂಪುಟಗಳು

| | | | |
|---|---|---|---|
| ೧. | ವಚನವಾಹಿನಿ ಭಾಗ-೧ | – | ಮ.ನ. ಜವರಯ್ಯ |
| ೨. | ವಚನವಾಹಿನಿ ಭಾಗ-೨ | – | ಓ. ಎಲ್. ನಾಗಭೂಷಣ |
| ೩. | ವಚನವಾಹಿನಿ ಭಾಗ-೩ | – | ಟಿ.ಆರ್. ಚಂದ್ರಶೇಖರ |
| ೪. | ವಚನವಾಹಿನಿ ಭಾಗ-೪ | – | ಜಯಶ್ರೀ ದಂಡೆ |
| ೫. | ವಚನವಾಹಿನಿ ಭಾಗ-೫ | – | ಗಂಗಮ್ಮ ಸತ್ಯಂಪೇಟೆ |
| ೬. | ವಚನವಾಹಿನಿ ಭಾಗ-೬ | – | ಜಿ.ಎಂ. ಹೆಗಡೆ |
| ೭. | ವಚನವಾಹಿನಿ ಭಾಗ-೭ | – | ಬಿ.ಕೆ. ಹಿರೇಮಠ |
| ೮. | ವಚನವಾಹಿನಿ ಭಾಗ-೮ | – | ಎಸ್.ಕೆ. ಕೊಪ್ಪ, ಸಿ.ವಿ. ಪ್ರಭುಸ್ವಾಮಿಮಠ |
| ೯. | ವಚನವಾಹಿನಿ ಭಾಗ-೯ | – | ಚಂದ್ರಶೇಖರ ವಸ್ತ್ರದ |
| ೧೦. | ವಚನವಾಹಿನಿ ಭಾಗ-೧೦ | – | ಬಸವಲಿಂಗ ಸೊಪ್ಪಿಮಠ |
| ೧೧. | ವಚನವಾಹಿನಿ ಭಾಗ-೧೧ | – | ಮೃತ್ಯುಂಜಯ ರುಮಾಲೆ |

೧೨. ವಚನವಾಹಿನಿ ಭಾಗ-೧೨ - ಚಂದ್ರಶೇಖರ ವಸ್ತ್ರದ

೧೩. ವಚನವಾಹಿನಿ ಭಾಗ-೧೩ - ಗುರುಪಾದ ಮರಿಗುದ್ದಿ ಶ್ರೀನಿವಾಸ ಕುಲಕರ್ಣಿ

## ಬೆಳಗಾವಿ ನಾಗನೂರು ರುದ್ರಾಕ್ಷಿಮಠದ "ವೀರಶೈವ ಅಧ್ಯಯನ ಆಕಾಡೆಮಿ"

ಬೆಳಗಾವಿಯ ನಾಗನೂರು ರುದ್ರಾಕ್ಷಿಮಠಕ್ಕೆ ಶ್ರೀ ಸಿದ್ದರಾಮ ಸ್ವಾಮಿಗಳು ಪೀಠಾಧಿಕಾರಿಗಳಾಗಿ ಬಂದ ನಂತರ ಡಾ. ಎಂ.ಎಂ. ಕಲಬುರ್ಗಿಯವರ ಮಾರ್ಗದರ್ಶನದಲ್ಲಿ ೧೯೯೧ ರಲ್ಲಿ "ವೀರ ಶೈವ ಅಧ್ಯಯನ ಅಕಾಡಮಿ" ಯನ್ನು ಸ್ಥಾಪಿಸಿ ಹಲವಾರು ಮೌಲಿಕ ಗ್ರಂಥಗಳನ್ನು ಡಾ. ಎಂ.ಎಂ. ಕಲಬುರ್ಗಿಯವರು ಪ್ರಕಟಿಸಿದರು. ವೀರಶೈವ ಅಧ್ಯಯನ ಆಕಾಡಮಿಯ ಮೂಲಕ "ಲಿಂಗಾಯತ ಜನಪ್ರಿಯ ಸಾಹಿತ್ಯ ಮಾಲೆ" ಯ ಮೂಲಕ ಲಿಂಗಾಯತ ಗಣ್ಯ ವ್ಯಕ್ತಿಗಳ ಸುಪ್ರಸಿದ್ದ ಶೈಕ್ಷಣಿಕ ಸಾಹಿತ್ಯಕ , ಆರ್ಥಿಕ, ಸಾಮಾಜಿಕ ಸಂಸ್ಥೆಗಳ ಪರಿಚಯಗಳಿಗೆ ಈ ಮಾಲೆಯಲ್ಲಿ ಪ್ರಕಟಣೆಗೆ ಅವಕಾಶಗಳನ್ನು ಕಲ್ಪಿಸಿಕೊಟ್ಟರು. ಕನ್ನಡ ಸಂಶೋಧನಾ ಗ್ರಂಥಗಳು ಪ್ರಕಟಣೆಗೊಂಡವು. ಬಿ.ಎಸ್.ಶೇಶೆಯವರ "ಕರ್ನಾಟಕದಲ್ಲಿ ಸತಿ ಪದ್ದತಿ" ಜೆ.ಎಂ. ನಾಗಯ್ಯ ಅವರ "ಆರನೆಯ ವಿಕ್ರಮಾದಿತ್ಯನ ಶಾಸನಗಳು :ಒಂದು ಅಧ್ಯಯನ" "ದಾಸೋಹ " "ಹಿಂದಣ ಹೆಜ್ಜೆ" ಎಂಬ ಸ್ಮರಣ ಸಂಪುಟಗಳು ಪ್ರಕಟಗೊಂಡವು. ಲಿಂಗಾಯತ ಅಧ್ಯಯನ ಅಕಾಡಮಿಯ ಮೂಲಕ ಹಲವಾರು ಸೃಜನ ಶೀಲ ಕೃತಿಗಳನ್ನು ಮತ್ತು ಪಿ.ಎಚ್.ಡಿ. ಪ್ರಬಂಧಗಳನ್ನು ಪ್ರಕಟಿಸಿ ನಾಡಿನ ವಿದ್ವಾಂಸರ ಗಮವನ್ನು ಸೆಳೆದಿದೆ. ನಾಗನೂರ ರುದ್ರಾಕ್ಷಿ ಮಠದಿಂದ "ಲಿಂಗಾಯತ" ಎಂಬ ಹೆಸರಿನ ಪತ್ರಿಕೆಯನ್ನು ಪ್ರಕಟಿಸಲಾಗುತ್ತಿದೆ. ಈಗ ಸಂಶೋಧನ ಕೇಂದ್ರದ ಅಂಗಸಂಸ್ಥೆಯಾಗಿ ವಚನ ಅಧ್ಯಯನ ಕೇಂದ್ರವನ್ನು ಸ್ಥಾಪನೆ ಮಾಡಿ ಅದರ ಮೂಲಕ ವಚನ ಅಧ್ಯಯನ ಎಂಬ ಮಾಸ ಪತ್ರಿಕೆಯನ್ನು ನಿಯಮಿತವಾಗಿ ಪ್ರಕಟಿಸುತ್ತಲಿದೆ. ಈ ಕೇಂದ್ರದ ಎಲ್ಲ ಕಾರ್ಯಗಳ ಹಿಂದೆ ಡಾ. ಎಂ.ಎಂ. ಕಲಬುರ್ಗಿಯವರ ಮಾರ್ಗದರ್ಶನ ಶಕ್ತಿಯು ಕಾರ್ಯನಿರ್ವಹಿಸುತ್ತಿಲಿತ್ತು.

## ಡಾ. ಫ. ಗು. ಹಳಕಟ್ಟಿ ಸಂಶೋಧನಾ ಕೇಂದ್ರ ವಿಜಯಪುರ

ಡಾ. ಎಂ.ಎಂ. ಕಲಬುರ್ಗಿಯವರು "ಡಾ. ಫ.ಗು. ಹಳಕಟ್ಟಿ ಸಮಗ್ರ ಸಾಹಿತ್ಯ ಪ್ರಕಟಣ ಯೋಜನೆಯಲ್ಲಿ ಸಿದ್ದಗೊಳಿಸಿದರು. ಸರಕಾರವು ಕೈಗೊಳ್ಳಬೇಕಾದ ಈ ಬೃಹತ್ ಯೋಜನೆಯನ್ನು ವಿಜಯಪುರದ ಬಿ.ಎಲ್.ಡಿ. ಇ. ಒಂದು ಖಾಸಗಿ ಶಿಕ್ಷಣ ಸಂಸ್ಥೆ ಕೈಗೊಂಡಿತ್ತು. ವಚನ ಪಿತಾಮಹ ಡಾ. ಫ. ಗು. ಹಳಕಟ್ಟಿಯವರು ಸೃಷ್ಟಿಸಿದ ಸಾಹಿತ್ಯವನ್ನು ವ್ಯವಸ್ಥಿತವಾಗಿ ಸಂಗ್ರಹಿಸುವುದು. ಅದನ್ನೆಲ್ಲವನ್ನು ಕೂಲಂಕುಷವಾಗಿ ಪರಿಷ್ಕರಿಸಿ ಸಮರ್ಥವಾಗಿ ಸಂಪಾದಿಸುವ ವಿದ್ವಾಂಸರ ಪಡೆಯನ್ನು ಆಯ್ಕೆ ಮಾಡಿ ಆ ಕೆಲಸವನ್ನು ಅಣಿಗೊಳಿಸುವುದು ಸಮಾನ ಮನಸ್ಕರನ್ನೆಲ್ಲ ಒಂದೆಡೆ ಸಂಘಟಿಸಿಕೊಂಡು ಪ್ರೇರೆಪಿಸಿ ಎಲ್ಲರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಶಿಷ್ಯ ಪರಂಪರೆಯನ್ನು ನೀಡುತ್ತ ಸತತವಾಗಿ ತಮ್ಮನ್ನು ಡಾ.

ಎಂ.ಎಂ. ಕಲಬುರ್ಗಿಯವರು ಈ ಮಹತ್ವದ ಕೆಲಸದಲ್ಲಿ ತೊಡಗಿಸಿಕೊಂಡು ನಾಲ್ಕ ವರ್ಷಗಳ ಅವಧಿಯಲ್ಲಿ ೧೨,೫೦೦ ಪುಟಗಳ ಹದಿನೈದು ಸಂಪುಟಗಳಲ್ಲಿ ಈ ಅಮೂಲ್ಯ ಸಮಗ್ರ ಸಾಹಿತ್ಯವನ್ನು ಹೊರತಂದು ಅದರ ಅಪರೂಪದ ದರ್ಶನವನ್ನು ನಾಡಿಗೆ ಮಾಡಿಸಿದರು.

ಸಂಪುಟ -೧ ವಚನ ಸಾಹಿತ್ಯ ೧ ಸಂಪಾದಕರು ಡಾ. ಎಸ್.ಆರ್. ಗುಂಜಾಳ

ಸಂಪುಟ -೨ ವಚನ ಸಾಹಿತ್ಯ -೨ ಸಂಪಾದಕರು ಡಾ. ಬಸವರಾಜ ಜಗಜಂಪಿ

ಸಂಪುಟ -೩ ವಚನ ಸಾಹಿತ್ಯ-೩ ಸಂಪಾದಕರು ಡಾ. ಗುಂಡಣ್ಣ ಕಲಬುರ್ಗಿ

ಸಂಪುಟ -೪ ವಚನ ಸಾಹಿತ್ಯ -೪ ಸಂಪಾದಕರು ಡಾ. ವಿ.ಎಸ್. ಮಾಳಿ

ಸಂಪುಟ -೫ ವಚನ ಸಾಹಿತ್ಯ-೫ ಸಂಪಾದಕರು ಡಾ. ಎಂ.ಎಂ.ಕಲಬುರ್ಗಿ

ಸಂಪುಟ-೬ ವಚನ ಸಾಹಿತ್ಯ -೬ ಸಂಪಾದಕರು ಡಾ. ವೀರಣ್ಣ ರಾಜೂರ

ಸಂಪುಟ-೭ ವಚನ ವಿವೇಚನೆ - ಸಂಪಾದಕರು,ಡಾ. ಜಿ. ಎಂ. ನಾಗಯ್ಯ

ಸಂಪುಟ-೮ ಕಾವ್ಯ ಸಾಹಿತ್ಯ ೧ ಸಂಪಾದಕರು ಡಾ. ಬಿ.ವಿ. ಮಲ್ಲಾಪೂರ

ಸಂಪುಟ -೯ ಕಾವ್ಯ ಸಂಪುಟ-೨ ಸಂಪಾದಕರು ಡಾ.ಬಾಳಣ್ಣ ಸೀಗಿಹಳ್ಳಿ

ಸಂಪುಟ -೧೦ ಚರಿತ್ರೆ ಸಾಹಿತ್ಯ -೧ ಸಂಪಾದಕರು ಡಾ. ಎಸ್.ಕೆ. ಕೊಪ್ಪಾ
ಡಾ. ಎಂ.ಎಂ. ಪಡಶೆಟ್ಟಿ

ಸಂಪುಟ -೧೧ ಚರಿತ್ರೆ ಸಾಹಿತ್ಯ -೨ ಸಂಪಾದಕರು ಡಾ.ಎಂ.ಎಸ್. ಮದಭಾವಿ

ಸಂಪುಟ -೧೨ ಚರಿತ್ರೆ ಸಾಹಿತ್ಯ -೩ ಸಂಪಾದಕರು ಸಿದ್ದಲಿಂಗ ದೇಸಾಯಿ

ಸಂಪುಟ-೧೩ ಲೇಖನ ಸಾಹಿತ್ಯ -೧ ಸಂಪಾದಕರು ಡಾ.ಬಿ.ಎಂ. ಪಾಟೀಲ

ಸಂಪುಟ-೧೪ ಲೇಖನ ಸಾಹಿತ್ಯ -೨ ಸಂಪಾದಕರುಡಾ.ಪಿ. ರಾಠೋಡ

ಸಂಪುಟ -೧೫ ಲೇಖನ ಸಾಹಿತ್ಯ -೩ ಸಂಪಾದಕರು ಡಾ. ಸರಸ್ವತಿದೇವಿ ಭಗವತಿ
ಡಾ. ಎಚ್.ಎಸ್. ಮೇಲಿನಮನಿ

"ಡಾ. ಫ. ಗು. ಹಳಕಟಟ ಸ್ಮಾರಕ ಭವನ" ಕಟ್ಟದ ಉದ್ಘಾಟನಾ ಸಮಾರಂಭವು ದಿನಾಂಕ ೨ಜುಲೈ ೨೦೦೩ ರಲ್ಲಿ ಹಮ್ಮಿಕೊಂಡಿದ್ದ ಸಂದರ್ಭದಲ್ಲಿ ಅತಿಥಿಯಾಗಿ ಪಾಲ್ಗೊಂಡಿದ್ದ ಡಾ. ಎಂ.ಎಂ. ಕಲಬುರ್ಗಿಯವರ ಸಮಗ್ರ ಹಳಕಟ್ಟಿ ಸಾಹಿತ್ಯ ಪ್ರಕಟಣೆಯ ಯೋಜನೆಯನ್ನು ಅಸ್ತಿತ್ವಕ್ಕೆ ತಂದು ನಾಲ್ಕು ವರ್ಷಗಳ ಅವಧಿಯಲ್ಲಿತಾವು ಹಾಕಿಕೊಂಡ ಯೋಜನೆಯನ್ನು ಅತ್ಯಂತ ಸಮರ್ಥವಾಗಿ ಪೂರ್ಣಗೊಳಿಸಿ ನಾಡಿಗೆ ಫ.ಗು.ಹಳಕಟ್ಟಿಯವರ ಸಾಹಿತ್ಯವನ್ನು ದೊರಕಿಸುವಂತ ಮಹಾಕಾರ್ಯದ ಯೋಜನೆಯ ಫಲ ಡಾ. ಎಂ.ಎಂ. ಕಲಬುರ್ಗಿಯವರಿಗೆ ಸಲ್ಲುತ್ತದೆ.

# ಅಧ್ಯಾಯ : ಆರು

# ಸಮಾರೋಪ

"ನಾನು ಸಾಯುವುದಿಲ್ಲ ನನ್ನಲ್ಲಿ ಸತ್ಯ ಜೀವಂತವಾಗಿರುವವರೆಗೆ ನಾನು ಹುಟ್ಟಿದ್ದು ಸಾಯಲಿಕೆಕ ಅಲ್ಲ ಸೂರಚಂದ್ರರ ಕೂಡ ಬದುಕಲಿಕ್ಕೆ" ಇಪ್ಪತ್ತನೆಯ ಶತಮಾನದ ಉತ್ತರಾರ್ಧ ಕನ್ನಡ ಸಂಶೋಧನೆಯ ಸುವರ್ಣಯುಗವೆಂದೇ ಹೇಳಬಹುದು. ಗಾತ್ರ ಪ್ರಮಾಣದಲ್ಲಿಲ್ಲದಿದ್ದರೂ ಗುಣಗಣನೆಯ ದೃಷ್ಟಿಯಿಂದ ಉತ್ತಮ ಸಂಶೋಧನೆಯನ್ನು ನೆಡೆಸಿರುವ ವಿದ್ವಾಂಸರಲ್ಲಿ ನಾಯಕ ಸ್ಥಾನದಲ್ಲಿದ್ದವರು ಕಲಬುರ್ಗಿಯವರು" ಎಂ.ಎಂ. ಕಲಬುರ್ಗಿಯವರನ್ನು ಕುರಿತು ಕನ್ನಡದ ಹಿರಿಯ ವಿದ್ವಾಂಸರಾದ ದೇ. ಜವರೇಗೌಡರು ಹೇಳಿದ ವಿಚಾರಗಳು ಕಲಬುರ್ಗಿಯವರು ಕನ್ನಡ ಸಂಶೋಧನಾ ಕ್ಷೇತ್ರಕ್ಕೆ ನೀಡಿದ ಕೊಡುಗೆಯನ್ನು ಅರ್ಥೈಸಿಕೊಡುತ್ತವೆ. ೧೯೬೨ ರಿಂದ ಪ್ರಾರಂಭವಾದ ಕಲಬುರ್ಗಿಯವರ ಕೆಲಸಗಳು ಸಾಹಿತ್ಯ ಸಂಶೋಧನಾ ಕ್ಷೇತ್ರಗಳಲ್ಲಿ ಹೊಸ ಹೊಸ ವಿಚಾರಗಳ ಶೋಧಗಳೊಂದಿಗೆ ಐವತ್ತೂರು ವರ್ಷಗಳ ಕಾಲ ಬೋಧನೆ ಸಂಶೋಧನೆ, ಸಂಪಾದನೆ, ಪ್ರಕಟಣೆಗಳಂಥ ಕ್ರಿಯಾಶೀಲ ಕಾರ್ಯಗಳೊಂದಿಗೆ ಸಂಶೋಧನಾ ಕ್ಷೇತ್ರವನ್ನು ಬೆಳೆಸಿದವರು ಡಾ. ಎಂ.ಎಂ. ಕಲಬುರ್ಗಿಯವರು.

ವಚನ ಸಂಪಾದನೆಯಿಂದ ಪ್ರಾರಂಭಗೊಂಡ ಅವರ ಬರವಣಿಗೆಯ ಲೇಖನಗಳು, ವಚನ ಸಾಹಿತ್ಯ, ನಿಘಂಟು, ಶಾಸನ, ಗ್ರಂಥ ಸಂಪಾದನೆ, ಹಸ್ತ ಪ್ರತಿಶಾಸ್ತ್ರ, ನಾಮ ವಿಜ್ಞಾನ, ಛಂದಸ್ಸು , ಜಾನಪದ, ಇತಿಹಾಸ ಕ್ಷೇತ್ರಗಳಲ್ಲಿ ವಿದ್ವತ್‌ಪೂರ್ಣ ಗ್ರಂಥಗಳು ರಚನೆಯಾದವು. ನಾಲ್ಕು ಸಾವಿರ ಪುಟಗಳ ಅವರ ಆರು ಮಾರ್ಗ ಸಂಪುಟಗಳು ಸಂಶೋಧನಾ ಕ್ಷೇತ್ರದ ಮೇರು ಕೃತಿಗಳಾದರೆ , ಜಗದ್ಗುರು ತೋಂಟದಾರ್ಯಮಠದ ಲಿಂಗಾಯತ ಅಧ್ಯಯನ ಸಂಸ್ಥೆಯಿಂದ ವಿವಿಧ ಸಾಹಿತ್ಯ ಮಾಲೆಯ ಹೆಸರಿನಲ್ಲಿ ಪ್ರಕಟಣಗೊಳಿಸಿದ ಐವತ್ತು ಸಾವಿರ ಪುಟಗಳ ನಾಲ್ಕು ನೂರಕ್ಕೂ ಹೆಚ್ಚು ಪುಸ್ತಕಗಳು ಬಿಡುಗಡೆಗೊಳ್ಳಲು ಪ್ರೇರಣಾಶಕ್ತಿಯಾಗಿ ಕ್ರಿಯಾಶಕ್ತಿಯಾಗಿ ಮಾರ್ಗದರ್ಶನ ನೀಡಿದವರು

ಕಲಬುರ್ಗಿಯವರು ಇವುಗಳೊಂದಿಗೆ ಸಮಗ್ರ ವಚನ ಸಾಹಿತ್ಯದ ಜನಪ್ರೀಯ ೧೫ ಸಂಪುಟಗಳು, ಪ್ರಾಚೀನ ಅಪ್ರಕಟಿತ ಕನ್ನಡ ಸಾಹಿತ್ಯ ಪ್ರಕಟಣೆಯೋಜನೆ ೫೦ ಕೃತಿಗಳು, ಫ.ಗು. ಹಳಕಟ್ಟಿ ಸಮಗ್ರ ಸಾಹಿತ್ಯ ೧೫ ಸಂಪುಟಗಳು, ಬಸವರಾಜ ಕಟ್ಟಿಮನಿ ಸಮಗ್ರ ಸಾಹಿತ್ಯ–೧೫ ಸಂಪುಟಗಳು, ಚಿತ್ರದುರ್ಗದ ಶ್ರೀ ಜಗದ್ಗುರು ಮುರುಘರಾಜೇಂದ್ರ ವಿದ್ಯಾಪೀಠದ ೨೫ ಸಂಶೋಧನಾ ಪ್ರಬಂಧಗಳು, ವಚನ ಭಾಷಾಂತರ ಯೋಜನೆ, ಬಸವಸಮಿತಿ ೨೫ ಸಂಪುಟಗಳು. ಗಳಗನಾಥ ಸಮಗ್ರ ಕಾದಂಬರಿ ಸಂಪುಟ –೬ ಸಂಪುಟಗಳು, ಕೆರೂರ ವಾಸುದೇವಾಚಾರ್ಯ ಸಮಗ್ರ ಸಾಹಿತ್ಯ–೩, ಸಂಪುಟಗಳು ಸಿರಸಂಗಿ ಸಂಸ್ಥಾನ ಸಾಹಿತ್ಯ ಸಂಪುಟ ನವಲಗುಂದ ಟ್ರಸ್ಟ ಬೆಳಗಾವಿ –೨ ಸಂಪುಟಗಳು ಈ ಎಲ್ಲ ಕೃತಿಗಳ ಪ್ರಧಾನ ಸಂಪಾದಕರಾಗಿ, ಸಾಹಿತ್ಯ ಸಂಪಾದನೆಗೆ ಡಾ. ಕಲಬುರ್ಗಿಯವರ ಸಾಧನೆ ದಾಖಲಾರ್ಹವಾದುದು. ಅವರ ಸಾಹಿತ್ಯ ಸಂಪಾದನೆಗೆ ಡಾ. ಕಲಬುರ್ಗಿಯವರ ಸಾಧನೆ ದಾಖಲಾರ್ಹವಾದುದು ಅವರ ಸಾಹಿತ್ಯ ಸಂಪಾದನಾ ಕೃತಿಗಳಲ್ಲಿ ೧೨೫ ಕ್ಕಿಂತಲೂಹೆಚ್ಚು ಗ್ರಂಥಗಳು ವಚನ ಸಂಪಾದನೆಗೆ ಸೇರಿದವುಗಲಾಗಿವೆ. ಎಪ್ಪತ್ತೇಳು ವರ್ಷಗಳ ತಮ್ಮ ಜೀವಿತ ಅವಧಿಯಲ್ಲಿ ೫೩ ವರ್ಷಗಳ ಕಾಲವನ್ನು ಬೋಧನೆ ಸಂಶೋಧನೆ, ಪ್ರಕಟಣೆ ಗಳಿಗಾಗಿ ಮುಡುಪಾಗಿಟ್ಟು ತಾವು ದುಡಿಯುವುದಾದರೊಂದಿಗೆ ಇತರಿಗೆ ಪ್ರೇರಣೆಯಾಗಿ ಮಾರ್ಗದರ್ಶಕರಾಗಿ ಕನ್ನಡ ನಾಡಿನ ಸಾಂಸ್ಕೃತಿಕ ರಾಯಬಾರಿಯಂತೆ ಭಾರತದ ತುಂಬೆಲ್ಲ ಕ್ಷೇತ್ರ ಕಾರ್ಯವನ್ನು ಕೈಗೊಂಡ ಅಲಕ್ಷಿತ ವಿಷಯಗಳ ಬಗ್ಗೆ ಶೋಧನೆ ಅಪ್ರಕಟಿತ ಸಾಹಿತ್ಯವನ್ನು ಪ್ರಕಟಿಸುವ ಮೂಲಕ ಅನೇಕ ಕ್ಷೇತ್ರಗಳನ್ನು ಬಾಗಿಲುಗಳನ್ನು ತೆರದರು.

ಡಾ.ಕಲಬುರ್ಗಿಯವರ ಸಂಶೋಧನಾ ಕ್ಷೇತ್ರ ಸಾಹಿತ್ಯ ಸಂಪಾದನಾ ಕ್ಷೇತ್ರ ವೈವಿಧ್ಯಮಯವಾದುದು ಅವರ ಸಮಗ್ರಸಾಹಿತ್ಯದ ಅಧ್ಯಯನವು ಬಹು ವಿಸ್ತಾರವಾದುದು. ಪ್ರಸ್ತುತ ಪ್ರಬಂಧವು ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆ ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಕಿರು ಪರಿಚಯವನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ. ಡಾ. ಕಲಬುರ್ಗಿಯವರು ವಿಜಯಪುರ ಜಿಲ್ಲೆಯ ಗ್ರಾಮ ಪರಿಸರದ ಶ್ರಮ ಸಂಸ್ಕೃತಿಯಲ್ಲಿ ತಮ್ಮ ಬದುಕನ್ನು ರೂಪಿಸಿಕೊಂಡವರು ಅವಿಭಕ್ತ ಪ್ರಜ್ಞೆ ಕೂಡಿ ಬಾಳುವ ಸಂಘಟನಾ ಶಕ್ತಿಯು ಅವರನ್ನು ಅನೇಕ ಸಾಮೂಹಿಕ ಸಂಸ್ಥೆಗಳಲ್ಲಿ ವ್ಯವಸ್ಥಿತವಾಗಿ ಯೋಜನೆಗಳನ್ನು ಯಶಸ್ವಿಯಾಗಿ ಪೂರ್ಣಗೊಳಿಸುವಲ್ಲಿ ಅನುಭವವನ್ನು ನೀಡಿದೆ. ಎಂಬುದನ್ನು ಡಾ. ಎಂ.ಎಂ.ಕಲಬುರ್ಗಿಯವರ ಜೀವನ ಸಾದನೆ ಎಂಬ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

ವಚನ ಸಾಹಿತ್ಯ ಕನ್ನಡ ಸಾಹಿತ್ಯದ ಅಪರೂಪದ ಮತ್ತು ಅನನ್ಯ ಸಾಹಿತ್ಯ ಪ್ರಕಾರವಾಗಿದೆ. ೧) ವಚನಕಾರರು ದೇವವಾಣಿಗೆ ಜನವಾಣಿಯಾಗುವದು ಅಸಾದ್ಯವಾಗಿ ಜನವಾಣಿಯನ್ನೇ ದೇವವಾಣಿಯಮಟ್ಟಕ್ಕೇರಿಸಿದ ಪವಾಡ ವೀರ ಶೈವ ವಚನಕಾರರದು" ಎಂಬ ಶಿ.ಶಿ. ಬಸವನಾಳರ ಅಭಿಪ್ರಾಯದಂತೆ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ "ವಚನ ಚಳುವಳಿ" ಒಂದು ಅತ್ಯಂತ ಮಹತ್ವದ ಘಟ್ಟ. ಕಾಯಕ ಜೀವಿಗಳಾದ ಶರಣರು ಬಸವಣ್ಣನವರ ಪ್ರಭಾವಲಯದ ವ್ಯಕ್ತಿತ್ವದಲ್ಲಿ

ಲಿಂಗ ಬೇಧ,ವರ್ಣಭೇದ ,ವರ್ಗಭೇದ ಜಾತಿ ಬೇದಗಳನ್ನು ನಿರ್ಮೂಲನೆ ಮಾಡಿಅಭೇದ ಸಂಸ್ಕೃತಿಯೊಂದಿಗೆ ಸರ್ವರಿಗೂ ಸಮಬಾಳು ಸರ್ವರಿಗೂ ಪಾಲು ಎಂಬ ಸಾಮಾಜಿಕ ಸಮಾನತೆಯ ಶರಣ ಸಿದ್ಧಾಂತದ ಮೇಲೆ ಸಮಾಜವನ್ನು ನಿರ್ಮಾಣ ಮಾಡಿದುದು ಜಾಗತಿಕ ಇತಿಹಾಸದಲ್ಲಿ ಬಹು ಅಪರೂಪದ ಘಟನೆಯಾಗಿದೆ. ಹನ್ನೆರಡನೆಯ ಶತಮಾನದ ಶರಣರ ವಚನಗಳ ಸಂಗ್ರಹ, ಸಂಪಾದನೆ, ಪರಿಷ್ಕರಣೆ, ಪ್ರಕಟನೆ, ಕನ್ನಡ ಸಾಹಿತ್ಯ ಚರಿತ್ರೆಯ ಇತಿಹಾಸದಲ್ಲಿ ಐತಿಹಾಸಿಕ ಘಟ್ಟ ವಚನ ಸಾಹಿತ್ಯ ಪ್ರಕಟಣೆಯ ಇತಿಹಾಸದ ಮಾರ್ಗದಲ್ಲಿ ಡಾ. ಫ.ಗು. ಹಳಕಟ್ಟಿ ಪ್ರೊ. ಶಿ.ಶಿ. ಬಸವನಾಳ ಡಾ. ಆರ್.ಸಿ. ಹಿರೇಮಠರ ವಚನ ಸಂಪಾದನೆಯ ಯೋಜನೆಗಳ ಐತಿಹಾಸಿಕ ಸಂಗತಿಗಳಾಗಿದೆ. ಇವುಗಳ ಮುಂದಿನ ಕಾರ್ಯವನ್ನು ರಾಜ್ಯಮಟ್ಟ ರಾಷ್ಟ್ರಮಟ್ಟ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ವಚನಗಳ ಪ್ರಸಾರವನ್ನು ಸಂಪಾದನೆಗಳ ಮುಖೇನ ಅನೇಕ ಯೋಜನೆಗಳ ರೂಪಿಸಿದ ರೂವಾರಿ ಡಾ. ಎಂ.ಎಂ. ಕಲಬುರ್ಗಿಯವರು. ವಚನ ಸಾಹಿತ್ಯ ಡಾ. ಎಂ.ಎಂ. ಕಲಬುರ್ಗಿಯವರ ಅಚ್ಚು ಮೆಚ್ಚಿನ ಸಂಶೋಧನ ಕ್ಷೇತ್ರ ಅವರ ಜೀವತಾವಧಿಯ ೭೭ ವರ್ಷಗಳಲ್ಲಿ ೨೪ ವರ್ಷ ವಿದ್ಯಾಭ್ಯಾಸಕ್ಕಾಗಿ ಕಳೆದರೆ ಉಳಿದ ೫೩ ವರ್ಷಗಳನ್ನು ಬೋಧನೆ ಸಂಶೋಧನೆ ಬರವಣಿಗೆ ಪ್ರಕಟಣೆಗಾಗಿ ಮಿಸಲಾಗಿಟ್ಟಿರುವುದು ಅವರ ಸಾಹಿತ್ಯ ಸಂಪಾದನೆಯ ಅಧ್ಯಯನದಿಂದ ತಿಳಿದು ಬರುತ್ತದೆ. ಡಾ. ಕಲಬುರ್ಗಿಯವರು ರಚಿಸಿದ ೧೨೦ ಕೃತಿಗಳಲ್ಲಿ ೩೦ ಕೃತಿಗಳು ಒಟ್ಟು ೭೫೪ ಲೇಖನಗಳಲ್ಲಿ ೨೨೮ ಲೇಖನಗಳು ವಚನ ಸಾಹಿತ್ಯಕ್ಕೆ ಸಂಬಂಧಿಸಿದವುಗಳಾಗಿವೆ. ಬಸವಣ್ಣನವರ ಟೀಕಿನ ವಚನಗಳಿಂದ ಪ್ರಾರಂಭವಾದ ಡಾ. ಕಲಬುರ್ಗಿಯವರ ವಚನ ಸಂಪಾದನೆ ಸಧ್ಯದ ಅವಧಿಯಲ್ಲಿ ಜಗದ್ಗುರು ತೋಂಟದಾರ್ಯಮಠದ ಲಿಂಗಾಯತ ಅಧ್ಯಯನ ಸಂಸ್ಥೆಯಿಂದ ಪ್ರಕಟಗೊಂಡ "ಏಕೋತ್ತರ ಶತಸ್ಥಲ" ಕೃತಿಯವರೆಗಿನ ವಚನ ಸಂಪಾದನೆಯ ಪರಿಚಯಾತ್ಮಕ ವಿಷಯವನ್ನು "ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆ" ಅಧ್ಯಾಯದಲ್ಲಿ ಕ್ರೋಢಿಕರಿಸಲಾಗಿದೆ.

ಡಾ. ಕಲಬುರ್ಗಿಯವರು ವಚನ ಸಾಹಿತ್ಯವನ್ನು ಭಾರತೀಯ ಎಲ್ಲ ಭಾಷೆಗಳಲ್ಲಿ ಅನುವಾದಿಸಿ ಅವುಗಳನ್ನು ಸಂಗ್ರಹಿಸಿ, ಪ್ರಕಟಿಸಬೇಕೆಂಬ ಬೃಹತ್ ಯೋಜನೆಯನ್ನು ರೂಪಿಸಿ ಕರ್ನಾಟಕ ಘನ ಸರ್ಕಾರದಿಂದ ಬಸವ ಸಮಿತಿಗೆ ಅನುದಾನವನ್ನು ಬಿಡುಗಡೆ ಮಾಡಿಸಿ ಅವುಗಳನ್ನು 'ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿಯ ಮಹಾಸಂಪುಟ' (ಬೈಬಲ್ ಮಾದರಿ) ಗಳನ್ನು ಎರಡೇ ಸಂಪುಟಗಳಲ್ಲಿ ಬೈಬಲ್ ಮಾದರಿಯಲ್ಲಿ ಪ್ರಕಟಿಸಿ ಎಲ್ಲ ಓದುಗರಿಗೆ ಸುಲಭವಾಗಿ ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡುವ ಯೋಜನೆಯನ್ನು ಹಾಕಿಕೊಂಡು ಈ ಸಂಪುಟಗಳ ಎಲ್ಲ ಕಾರ್ಯಗಳನ್ನು ಮುಗಿಸಿ ಅದು ಮುದ್ರಣಗೊಂಡು ಬಿಡುಗಡೆಗೆ ಅಣಿಗೊಳಿಸಿ "ಮಹಾಮಣಿಹ" ಕ್ಕೆ ಭಾಜರಾದ "ಮಹಾಮಾರ್ಗದ ರೂವಾರಿ" ಡಾ. ಎಂ.ಎಂ. ಕಲಬುರ್ಗಿಯವರು ಎಂಬ ಡಾ. ವೀರಣ್ಣಾ ರಾಜೂರ ಅವರ ಅಭಿಪ್ರಾಯಗಳ ಮಾತುಗಳೊಂದಿಗೆ ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

ಅಪ್ರಕಟಿತ ಸಂಪಾದನೆಗಳು ಡಾ. ಕಲಬುರ್ಗಿಯವರ ಮೂರನೆಯ ಆವೃತ್ತಿಯಲ್ಲಿ ಪ್ರಕಟಗೊಳ್ಳಲಿರುವ ಬೈಬಲ್ ಮಾದರಿಯ ಎರಡು ಸಂಪುಟಗಳು, ಬಹುಭಾಷಾ ಅನುವಾದ ಯೋಜನೆಯಲ್ಲಿ ೧೩ ಭಾಷೆಗಳಲ್ಲಿ ಅನುವಾದಗೊಂಡು ಕಾರ್ಯವು ಪೂರ್ಣಗೊಂಡು ಮುದ್ರಣಕ್ಕೆ ಸಿದ್ಧವಾಗಿವೆ. ಭಾರತ ಸಂವಿಧಾನ ಮಾನ್ಯ ಮಾಡಿದ ೨೨ ಭಾಷೆಗಳ ಅನುವಾದ ಕಾರ್ಯಗಳಲ್ಲಿ ಸಿದ್ದಗೊಂಡ ಡಾ. ಎಂ.ಎಂ. ಕಲಬುರ್ಗಿಯವರ ಮಾರ್ಗದರ್ಶನದಲ್ಲಿ ಪ್ರಕಟಣೆಗೊಳ್ಳಲಿರುವ ಪ್ರಮುಖ ಯೋಜನೆಗಳ ಅಧ್ಯಯನವು ಇನ್ನು ಮುಂದೆ ಆಗಬೇಕಾದ "ಡಾ. ಎಂ.ಎಂ. ಕಲಬುರ್ಗಿಯವರ ವಚನ ಸಂಪಾದನೆ"ಯ ಅಧ್ಯಯನದ ಪ್ರಮುಖವಾದ ಮತ್ತು ಅಗತ್ಯವಾದ ವಿಷಯವಾಗಿದೆ.

ವಚನ ಸಾಹಿತ್ಯ ಸಂಪಾದನೆಯು ನಡೆದು ಬಂದ ನೂರು ವರ್ಷಗಳ ಇತಿಹಾಸದಲ್ಲಿ ಡಾ. ಎಂ.ಎಂ. ಕಲಬುರ್ಗಿಯವರ ಕೊಡುಗೆ ಅತ್ಯಂತ ಪ್ರಮುಖವಾದುದು. ವ್ಯಕ್ತಿಯಾಗಿ ಸಂಸ್ಥೆಯಾಗಿ, ಒಂದು ಪ್ರಮುಖ ಯೋಜನೆಯ ಸಂಯೋಜಕರಾಗಿ, ಸಂಪಾದಕರಾಗಿ ಅವರು ಮಾಡಿರುವ ಕಾರ್ಯವನ್ನು ಬಹುತೇಕವಾಗಿ ವಿಶ್ವ ಯಾವ ದೇಶದಲ್ಲೂ ಈ ಪ್ರಮಾಣದಲ್ಲಿ ಮಾಡಿರುವ ಅಪರೂಪ ಮತ್ತು ಅವಿರಳ ಎಂದು ಹೇಳಬಹುದು.

ಒಟ್ಟಿನಲ್ಲಿ ಡಾ. ಎಂ.ಎಂ. ಕಲಬುರ್ಗಿಯವರ ಸಮಗ್ರ ಸಾಹಿತ್ಯದ ಅಧ್ಯಯನಗಳು ಬಹುಮುಖಿಯಾದುದು ಹತ್ತಾರು ಕ್ಷೇತ್ರಗಳಲ್ಲಿ ಅವರು ಮಾಡಿದ ಸಾಧನೆಗಳಲ್ಲಿ ಒಂದಾದ 'ವಚನ ಸಂಪಾದನೆಯ ವಿಷಯ ವಸ್ತುವನ್ನು ಪರಿಚಯಾತ್ಮಕವಾದ ಸ್ಥೂಲ ಅಧ್ಯಯನವನ್ನು ಈ ಕಿರು ಸಂಪ್ರಬಂಧದಲ್ಲಿ ಕೈಕೊಳ್ಳಲಾಗಿದೆ.

## ಅನುಬಂಧ – ೧

## ಡಾ. ಎಂ.ಎಂ. ಕಲಬುರ್ಗಿಯವರ ಜೀವನದ ಪ್ರಮುಖ ಘಟ್ಟಗಳು

### ನಾಡೋಜ ಡಾ. ಎಂ. ಎಂ. ಕಲಬುರ್ಗಿಯವರ ಪರಿಚಯ

| | | |
|---|---|---|
| ಜನನ | : | ೧೯೩೮ ನವ್ಹೆಂಬರ ೨೮ ಸೋಮವಾರ<br>ವಿಜಾಪೂರ ಜಿಲ್ಲೆಯ ಸಿಂದಗಿ ತಾಲೂಕಿನ, ತಾಯಿಯ ತವರೂರು ಗುಬ್ಬೇವಾಡದಲ್ಲಿ. |
| ಊರು | : | ಯರಗಲ್ಲ ಬಿ.ಕೆ. ತಾ. ಸಿಂದಗಿ ಜಿ. ವಿಜಾಪುರ |
| ತಂದೆ | : | ಮಡಿವಾಳಪ್ಪ ತಾಯಿ |
| ತಾಯಿ | : | ಶ್ರೀಮತಿ ಗುರಮ್ಮ |
| ಹೆಂಡತಿ | : | ಶ್ರೀಮತಿ ಉಮಾದೇವಿ |
| ಮದುವೆ | : | ೬–೨–೧೯೬೬ |
| ಮಕ್ಕಳು | : | ಶ್ರೀಮತಿ ಪೂರ್ಣಿಮಾ, ಶ್ರೀಮತಿ ಪ್ರತಿಮಾ, ಶ್ರೀ ವಿಜಯ, ಶ್ರೀಮತಿ ರೂಪದರ್ಶಿ |
| ಸೊಸೆ | : | ಶ್ರೀಮತಿ ಶಿಲ್ಪಾ |
| | | **ಶಿಕ್ಷಣ** |
| ೧೯೬೦ | : | ಬಿ.ಎ. ಪ್ರಥಮ ದರ್ಜೆ ಪ್ರಥಮ ರ್‍ಯಾಂಕ, ವಿಜಯ ಕಾಲೇಜ ವಿಜಯಪುರ, ಯು.ಜಿ.ಸಿ. ಶಿಷ್ಯವೇತನ |
| ೧೯೬೨ | : | ಎಂ.ಎ. (ಪ್ರಥಮ ದರ್ಜೆ ಪ್ರಥಮ ರ್‍ಯಾಂಕ) ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ (ಜಯಚಾಮರಾಜ ಒಡೆಯರ ಪಾರಿತೋಷಕ ಗೌರವ) |
| ೧೯೬೮ | : | ಕವಿರಾಜ ಪರಿಸರದ ಕನ್ನಡ ಸಾಹಿತ್ಯ ಮಹಾಪ್ರಬಂಧಕ್ಕೆ ಕರ್ನಾಟಕ ವಿಶ್ವವಿದ್ಯಾಲಯದಿಂದ ಡಾಕ್ಟರೇಟ (ಪಿ.ಎಚ್.ಡಿ.) |
| | | **ವೃತ್ತಿ –ಹುದ್ದೆ–ಹೊಣೆ** |
| ೧೯೬೨ | : | 'ಸಹಾಯಕ ಸಂಶೋಧಕ' ಸಮಗ್ರ ವಚನ ವಾಙ್ಮಯ ಸಂಶೋಧನ , ಸಂಸ್ಕರಣ ಪ್ರಕಟಣೆ ಯೋಜನೆ, ಕನ್ನಡ ಅಧ್ಯಯನ ಪೀಠ , ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ೧೯೬೨–೬೬ | : | ಕನ್ನಡ ಅಧ್ಯಾಪಕ, ಕರ್ನಾಟಕ ಕಾಲೇಜು, ಧಾರವಾಡ. |

೧೯೬೬-೭೧ : ಅಧ್ಯಾಪಕ, ಕನ್ನಡ ಅಧ್ಯಯನಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ (ಕನ್ನಡ ಸಂಘದ ಕಾರ್ಯಾಧ್ಯಕ್ಷ)

೧೯೬೮ : ಕನ್ನಡ ಭಾರತಿ (ತ್ರೈಮಾಸಿಕ) ಪತ್ರಿಕೆ ಆರಂಭ.

೧೯೬೧-೧೯೮೦ : ಕನ್ನಡ ಪ್ರವಾಚಕರಾಗಿ ಸೇವೆ

೧೯೭೧-೧೯೭೨ : ಕರ್ನಾಟಕ ವಿಶ್ವವಿದ್ಯಾಲಯದ ವಿದ್ಯಾರ್ಥಿ ಕೂಟದ ಸಾಂಸ್ಕೃತಿ ವಿಭಾಗದ ಉಪಾಧ್ಯಕ್ಷ

೧೯೭೫ : ವಿದ್ಯಾರ್ಥಿ ಭಾರತಿ ಪತ್ರಿಕೆ ಆರಂಭ

೧೯೭೭-೭೮ : ರಾಷ್ಟ್ರೀಯ ಉಪನ್ಯಾಸಕ ಗೌರವ ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ.

೧೯೮೦-೮೮ : ಪ್ರಾಧ್ಯಾಪಕ ಶ್ರೀ ಬಸವೇಶ್ವರ ಪೀಠ

೧೯೮೧ : ಬಸವೇಶ್ವರ ಅಧ್ಯಯನ ಡಿಪ್ಲೋಮಾ ಆರಂಭ

೧೯೮೨ : ಕರ್ನಾಟಕ ವಿಶ್ವವಿದ್ಯಾಲಯದ ಸಿಂಡಿಕೇಟ ಸದಸ್ಯರು

೧೯೮೨ : ಪ್ರಾಚೀನ ಕನ್ನಡ ಹಸ್ತಪ್ರತಿ ದಾಖಲೆಗಳ ಶೋಧಕ್ಕಾಗಿ ಇಂಗ್ಲೆಂಡ್ ಕೆಂಬ್ರಿಜ್ , ಆಕ್ಸಫರ್ಡಗಳಿಗೆ ಭೇಟಿ(ಅಕ್ಟೋಬರ -೧೪ ರಿಂದ ನವ್ಹಂಬರ ೨೬-೧೯೮೨)

೧೯೮೩-೮೫ : ಕನ್ನಡ ಅಧ್ಯಯನ ಪೀಠದ ಅಧ್ಯಕ್ಷರು

೧೯೮೪-೮೫ : ಕನ್ನಡ ಸಂಶೋಧನ ಸಂಸ್ಥೆಯ ಕಾರ್ಯನಿರ್ವಾಹಕ ನಿರ್ದೇಶಕ

೧೯೮೮ : ಕನ್ನಡ ಅಧ್ಯಾಪಕರಾಗಿ ಸೇವೆ ಆರಂಭ

೧೯೮೮ : ಕರ್ನಾಟಕ ವಿಶ್ವವಿದ್ಯಾಲಯದ ಅಕ್ಯಾಡೆಮಿಕ್ ಕೌನ್ಸಿಲ್ ಮೆಂಬರ್

೧೯೮೯ : ಕರ್ನಾಟಕ ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯರು.
ಕುಲಪತಿ ಹುದ್ದೆ ಸ್ವೀಕಾರ

೧೯೯೮-೨೦೦೧ : ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿ
ಮಠಮಾನ್ಯಗಳಲ್ಲಿ ಶೈಕ್ಷಣಿಕ ಸಂಸ್ಥೆಗಳ ಸ್ಥಾಪನೆ

೧೯೭೫ : ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯಮಠ ಗದಗ.

೧೯೯೧ : ವೀರಶೈವ ಅಧ್ಯಯನ ಅಕಾಡಮಿ , ಶ್ರೀನಾಗನೂರು ರುದ್ರಾಕ್ಷಿಮಠ, ಬೆಳಗಾವಿ.

೧೯೯೧ : ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ – ಆನಂದಪುರಮಠ ಶಿವಮೊಗ್ಗ

೧೯೯೩ : ಶರಣ ಸಂಸ್ಕೃತಿ ಅಕಾಡೆಮಿ – ಶಿವಲಿಂಗೇಶ್ವರ ಮಠ ನಿಡಸೋಸಿ

೧೯೯೬ : ಬಸವೇಶ್ವರ ಅಧ್ಯಯನ ಸಂಸ್ಥೆ – ಬಸವಣ್ಣನವರಮಠ ಕೊಡೇಕಲ್ಲ

೧೯೯೬ : ಸಮಗ್ರ ಸ್ವರ ಸಾಹಿತ್ಯ ಪ್ರಕಟ ಮಾಲೆ ಆರಂಭ ಶ್ರೀ ಶಿವರಾತ್ರೇಶ್ವರ ಸುತ್ತೂರಮಠ ಕೊಡೇಕಲ್ಲ

೧೯೯೪ : ಪೂಜ್ಯ ಶ್ರೀ ಚನ್ನವೀರಸ್ವಾಮೀಜಿ ಪ್ರತಿಷ್ಠಾನ ಸ್ಥಾಪನೆ ಮತ್ತು ಸಮರ್ಪಣ ಗ್ರಂಥ ಪ್ರಕಟಣೆ ಸಾರಂಗಮಠ ಸಿಂದಗಿ ಜಿ.ವಿಜಯಪುರ

ಯೋಜನೆಗಳ ನಿರ್ವಹಣೆ–ಕೃತಿ–ಪ್ರಕಟಣೆ

೧೯೯೩ : ಪ್ರಧಾನ ಸಂಪಾದಕರು, ಸಮಗ್ರ ವಚನ ಸಾಹಿತ್ಯ ಜನಪ್ರೀಯ ಸಂಪುಟ – ಕರ್ನಾಟಕ ಸರಕಾರ

೨೦೦೭–೨೦೧೧ : ಪ್ರಧಾನ ಸಂಪಾದಕರು , ಪ್ರಾಚೀನ ಅಪ್ರಕಟಿತ ಕನ್ನಡ ಸಾಹಿತ್ಯ ಪ್ರಕಟಣ ಯೋಜನೆ ಕರ್ನಾಟಕ ಸರ್ಕಾರ

೨೦೧೨ : ನಿರ್ದೇಶಕರು, ವಚನ ಭಾಷಾಂತರ ಯೋಜನೆ ಬಸವ ಸಮಿತಿ ಬೆಂಗಳೂರು

೨೦೧೨ : ಪ್ರಧಾನ ಸಂಪಾದಕರು, ಪ್ರಾಚೀನ ಗದ್ಯ ಸಾಹಿತ್ಯ ಮಾಲೆ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨೦೧೨ : ಪ್ರಧಾನ ಸಂಪಾದಕರು, ಫ.ಗು. ಹಳಕಟ್ಟಿ ಸಮಗ್ರ ಸಾಹಿತ್ಯ ೧೫ ಸಂಪುಟಗಳು, ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿ ಸಂಶೋಧನಾ ಕೇಂದ್ರ ಬಿ.ಎಲ್.ಡಿ. ಸಂಸ್ಥೆ. ವಿಜಾಪುರ

೨೦೧೪ : ಅಧ್ಯಕ್ಷರು ಆದಿಲ್ ಶಾಹಿ ಸಾಹಿತ್ಯ ಅನುವಾದ ಯೋಜನೆ

೨೦೧೫ : ಪ್ರಧಾನ ಸಂಪಾದಕರು ಬಸವರಾಜ ಕಟ್ಟೀಮನಿ ಸಮಗ್ರ ಸಾಹಿತ್ಯ (೧೫ ಸಂಪುಟಗಳು) ಬಸವರಾಜ ಕಟ್ಟೀಮನಿ ಪ್ರತಿಷ್ಠಾನ, ಬೆಳಗಾವಿ

೨೦೧೬ : ಪ್ರಧಾನ ಸಂಪಾದಕರು, ಡಾ. ಶಿವಮೂರ್ತಿ ಮುರುಘ ಶರಣರ ಪೀಠಾರೋಹಣ ಬೆಳ್ಳಿಹಬ್ಬ ಪಿ.ಎಚ್.ಡಿ . ಪ್ರಬಂಧ ಮಾಲೆ, ಚಿತ್ರದುರ್ಗ ಸಂಘ ಸಂಸ್ಥೆಗಳ ಜವಾಬ್ದಾರಿ

೧೯೮೧ : ಕಾರ್ಯದರ್ಶಿ ಗೋಕಾಕ ಚಳುವಳಿ ಮತ್ತು ಅಖಿಲ ಕರ್ನಾಟಕ ಕೇಂದ್ರ ಕ್ರಿಯಾ ಸಮಿತಿ .

೧೯೮೮. : ಕಾರ್ಯದರ್ಶಿ ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ

೨೦೦೬-೨೦೦೯ : ಅಧ್ಯಕ್ಷರು ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ, ಧಾರವಾಡ

೨೦೧೨-೨೦೧೫ : ಅಧ್ಯಕ್ಷರು ಬಸವರಾಜ ಕಟ್ಟೀಮನಿ ಪ್ರತಿಷ್ಠಾನ , ಬೆಳಗಾವಿ

೨೦೧೩-೨೦೧೪ : ಸದಸ್ಯರು ಕೇಂದ್ರ ಸಾಹಿತ್ಯ ಅಕಾಡೆಮಿ ನವದೆಹಲಿ

ಗೌರವ ಸನ್ಮಾನ

೧೯೯೩ : ಷಷ್ಠಿಪೂರ್ತಿ ಅಭಿನಂದನ ಸಮಾರಂಭ 'ಮಹಾಮಾರ್ಗ' ಅಭಿನಂದನ ಗ್ರಂಥ ಸಮರ್ಪಣೆ

ಕಲಬುರ್ಗಿ ೬೦ ಕೃತಿ ಪ್ರಕಟಣೆ

ಸಮ್ಮೇಳನ ಅಧ್ಯಕ್ಷತೆ

೧೯೯೪ : ಕರ್ನಾಟಕ ಇತಿಹಾಸ ಸಮ್ಮೇಳನಾಧ್ಯಕ್ಷ – ಸೊಂಡೂರು

೧೯೯೭ : ಅಖಿಲ ಭಾರತ ನಾಮ ವಿಜ್ಞಾನ ಸಮ್ಮೇಳನಾಧ್ಯಕ್ಷ ತಂಜಾವೂರ

೨೦೦೩ : ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನಾಧ್ಯಕ್ಷ ಬಾಗಲಕೋಟ

೨೦೦೪ : ಶ್ರೀ ಕೃಷ್ಣ ಪಾರಿಜಾತ ಸಮ್ಮೇಳನಾಧ್ಯಕ್ಷ ಮಹಾಲಿಂಗಪೂರ

೨೦೦೫ : ಹಸ್ತಪ್ರತಿ ಸಮ್ಮೇಳನಾಧ್ಯಕ್ಷ ವಿಜಾಪೂರ ಕ.ವಿ. ಹಂಪಿ

೨೦೧೦ : ಆಳ್ವಾಸ ನುಡಿ ಸಿರಿ ಸಮ್ಮೇಳನಾಧ್ಯಕ್ಷ ಮೂಡಬಿದಿರೆ

೨೦೧೦ : ಧರ್ಮಸ್ಥಳ ಸಾಹಿತ್ಯ ಸಮ್ಮೇಳನಾಧ್ಯಕ್ಷ ಧರ್ಮಸ್ಥಳ (ವಿರೇಂದ್ರ ಹೆಗಡೆ ಅವರು ಆಯೋಜಿಸಿದ)

## ಅನುಬಂಧ - ೨

### ಡಾ. ಎಂ.ಎಂ. ಕಲಬುರ್ಗಿಯವರಿಗೆ ಕೃತಿಗಳು

* ಶಾಸನ

೧. ಬಸವಣ್ಣನವರ ಕುರಿತ ಶಾಸನಗಳು ೧೯೬೮

೨. ಶಾಸನ ಸಂಪದ ೧೯೬೮

೩. ಶಾಸನಗಳಲ್ಲಿ ಶಿವಶರಣರು ೧೯೭೦

೪. ಶಾಸನ ವ್ಯಾಸಂಗ -೧ ೧೯೭೪

೫. ಧಾರವಾಡ ಜಿಲ್ಲೆಯ ಶಾಸನಸೂಚಿ ೧೯೭೫

೬. ಶಾಸನ ವ್ಯಾಸಂಗ -೨ ೧೯೭೫

೭. ವಿಜಾಪುರ ಜಿಲ್ಲೆಯ ಶಾಸನಸೂಚಿ ೧೯೭೫

೮. ಧಾರವಾಡ ತಾಲೂಕಿನ ಶಾಸನಗಳು ೧೯೭೬

೯. ಸಮಾಧಿ, ಬಲಿದಾನ, ವೀರಮರಣ ಸ್ಮಾರಕಗಳು ೧೯೮೦

೧೦. ಮಹಾರಾಷ್ಟ್ರದ ಕನ್ನಡ ಶಾಸನಗಳು ೧೯೮೨

೧೧. ಶಾಸನಸೂಕ್ತಿ ಸುಧಾಣವ ೧೯೯೯

೧೨. ಕನ್ನಡ ಶಾಸನ ಸಾಹಿತ್ಯ ೨೦೧೧

* ಸಂಶೋಧನೆ

೧೩. ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ ೧೯೭೩

೧೪. ಸಾಹಿತ್ಯ ಸಂಪಾದನೆ ೧೯೭೯

೧೫. ಮಾರ್ಗ-೧ ೧೯೮೮

೧೬. ಮಾರ್ಗ-೨ ೧೯೮೮

೧೭. ಕೊಲ್ಹಾಪಲುರ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನ ಬಸದಿಯ ಹಸ್ತಪ್ರತಿ ಸೂಚಿ೧೯೮೮

೧೮. ಐತಿಹಾಸಿಕ ೧೯೯೧

೧೯. ವಚನ ಸಾಹಿತ್ಯದ ಪ್ರಾಚೀನ ಆಕರ ಕೋಶ ೧೯೯೧

೨೦. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ
ಸಂಪುಟ ೧, ೬, ೭, ೮, ೯, ೧೦ ೧೯೯೨

೬೯. ವಚನ ೨೦೧೨

೭೦. ಕೋಡೆಕಲ್ಲ ವಚನ ವಾಕ್ಯ ೨೦೧೪

೭೧. ಏಕೋತ್ತರಶತಸ್ಥಲ ೨೦೧೪

೭೨. ಕಿತ್ತೂರು ಸಂಸ್ಥಾನ ಸಾಹಿತ್ಯ –೩ ೨೦೧೫

೭೩. ಹರಿಹರ ವಿರಚಿತ ಕನ್ನಡ ಶರಣರ ಕಥೆಗಳು ೨೦೧೨

* ಗ್ರಂಥ ಸಂಪಾದನೆ (ಆಧುನಿ)

೭೪. ವಚನಶಾಸ್ತ್ರಸಾರ ೧೯೮೨

೭೫. ಅರಟಾಳ ರುದ್ರಗೌಡರ ಚರಿತ್ರೆ ೨೦೦೨

೭೬. ರಾಷ್ಟ್ರಧರ್ಮಪ್ರಸಾರ : ಹರ್ಡೇಕರ ಮಂಜಪ್ಪ ಸಂಪುಟ –೨ ೨೦೦೬

೭೭. ಹಾಲಭಾವಿ ವೀರಭದ್ರಪ್ಪನವರ ಆತ್ಮಚರಿತ್ರೆ ೨೦೦೭

೭೮. ಡಾ. ಫ.ಗು. ಹಳಕಟ್ಟಿ ಸಮಗ್ರ ಸಾಹಿತ್ಯ ಸಂಪುಟ –೫ ೨೦೦೭

೭೯. ಡಾ. ಫ.ಗು. ಹಳಕಟ್ಟಿ ಆತ್ಮಚರಿತ್ರೆ ೨೦೦೮

* ಸಂಪಾದನೆ

೮೦. ದಿಗಂಬರ ೧೯೭೧

೮೧. ಬಸವಮಾರ್ಗ–೧ ೧೯೮೦

೮೨. ಬಸವಮಾರ್ಗ–೨ ೧೯೮೧

೮೩. ಬಸವಮಾರ್ಗ–೩ ೧೯೮೫

೮೪. ವಚನಸಾಹಿತ್ಯದ ಪ್ರಕಟಣೆಯ ಇತಿಹಾಸ ೧೯೯೦

೮೫. ಕರ್ನಾಟಕ ಗಾಂಧಿ ಹರ್ಡೇಕರ ಮಂಜಪ್ಪ ೧೯೮೯

೮೬. ಕೆಳದಿ ಸಂಸ್ಥಾನ : ಸಮಗ್ರ ಅಧ್ಯಯನ ೧೯೯೪

೮೭. ಮಾನಸೋಲ್ಲಾಸ ಪರಿಚಯ ೧೯೯೫

೮೮. ಸ್ವಾದಿ ಅರಸುಮನೆತನ ೧೯೯೫

೮೯. ಬಿಳಗಿ ಅರಸುಮನೆತನ ೧೯೯೫

೯೦. ಸ್ವರವಚನ ವಿಚಾರ ಸಂಕಿರಣ ಸಂಪುಟ ೧೯೯೭

೯೧. ಶಿವಾನುಭವ ಪತ್ರಿಕೆ ೧೯೯೭

೯೨. ಮಾನಸೋಲ್ಲಾಸ ಸಂಪುಟ ೧ , ೨ ೧೯೯೮

೯೩. ಭಾರತ ಸ್ವಾತಂತ್ರ್ಯ ಮತ್ತು ಕರ್ನಾಟಕ
ಏಕೀಕರಣ ಲಿಂಗಾಯತರ ಪಾತ್ರ ೧೯೯೮

೯೪. ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು ೧೯೯೯

೯೫. ಮಡಿವಾಳಪ್ಪ ಸಾಸನೂರ : ಬದುಕು-ಬರಹ ೨೦೦೯

೯೬. ನಿರ್ವಚನ-ಬಸವಧರ್ಮ ಪ್ರಚಾರ ಸಂಸ್ಥೆ, ಭಾಲ್ಕಿ ೨೦೧೦

* ದಾಖಲೆ

೯೭. ಕರ್ನಾಟಕದ ಕೈಫಿಯತ್ತುಗಳು ೧೯೯೪

೯೮. ಶ್ರೀ ತೋಂಟದಾರ್ಯ ಸಂಸ್ಥಾನಮಠದ ದಾಖಲ ಸಾಹಿತ್ಯ ಸಂಪುಟ -೧ ೨೦೦೮

* ಜಾನಪದ

೯೯. ಉತ್ತರ ಕರ್ನಾಟಕದ ಜನಪದ ಸಾಹಿತ್ಯ ೧೯೭೮

೧೦೦. ಜಾನಪದ ಮಾರ್ಗ ೧೯೯೫

* ಸೃಜನ

೧೦೧. ನೀರು ನೀರಡಿಸಿತ್ತು. (ಕವನ ಸಂಕಲನ)ಓ ೧೯೯೭

೧೦೨. ಕೆಟ್ಟಿತ್ತು ಕಲ್ಯಾಣ (ನಾಟಕ) ೧೯೯೭

೧೦೩. ಖರೇ ಖರೇ ಸಂಗ್ಯಾಬಾಳ್ಯಾ ೨೦೦೫

ಅನುಬಂಧ - ೩

ಡಾ. ಎಂ.ಎಂ. ಕಲಬುರ್ಗಿಯವರಿಗೆ ಲಭಿಸಿದ ಪ್ರಶಸ್ತಿಗಳು

| | | |
|---|---|---|
| ೧೯೭೭-೭೮ | : | ಯು.ಜಿ.ಸಿ. ರಾಷ್ಟ್ರೀಯ ಪ್ರಾಧ್ಯಾಪಕರು ಕ.ವಿ.ವಿ. ಧಾರವಾಡ. |
| ೧೯೯೦ | : | ವಿಶ್ವಮಾನವ ಪ್ರಶಸ್ತಿ (ಮಾರ್ಗ-೧, ಮಾರ್ಗ-೨)ಮೈಸೂರು. |
| ೧೯೯೧ | : | ರಾಜ್ಯೋತ್ಸವ ಪ್ರಶಸ್ತಿ (ಸಂಶೋಧನೆ) ಬೆಂಗಳೂರು |
| ೧೯೯೪ | : | ವರ್ಧಮಾನ ಸಾಹಿತ್ಯ ಪ್ರಶಸ್ತಿ (ಮಾರ್ಗ-೨) ಮೂಡಬಿದರೆ |
| ೧೯೯೬ | : | ಪಂಪ ಪ್ರಶಸ್ತಿ ಕರ್ನಾಟಕ ಸರಕಾರ ಬೆಂಗಳೂರು |
| ೧೯೯೭ | : | ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು |
| ೧೯೯೮ | : | ಶರಣ ಸಾಹಿತ್ಯ ಭಾಸ್ಕರ ಪ್ರಶಸ್ತಿ, ಶ್ರೀ ಮುರುಘರಾಜೇಂದ್ರ ಮಠ, ಚಿತ್ರದುರ್ಗ |
| ೨೦೦೨ | : | ಚಿದಾನಂದ ಪ್ರಶಸ್ತಿ (ಸಂಶೋಧನೆ) ಬೆಂಗಳೂರು |
| ೨೦೦೪ | : | ಸೇಡಿಯಾಪು ಕೃಷ್ಣಭಟ್ಟ್ ಪ್ರಶಸ್ತಿ (ಗೋವಿಂದ ಪೈ ಸಂಶೋಧನ ಕೇಂದ್ರ ಉಡುಪಿ) |
| ೨೦೦೬ | : | ಬಸವಭೂಷಣ ಪ್ರಸಸ್ತಿ, ಮೋಟಗಿಮಠ, ಅಥಣಿ |
| ೨೦೦೭ | : | ಶ್ರೀ ಕೃಷ್ಣ ಪ್ರಶಸ್ತಿ, ಶ್ರೀ ಪೇಜಾವರಮಠ, ಉಡುಪಿ |
| ೨೦೧೦ | : | ನಾಡೋಜ ಪ್ರಶಸ್ತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೨೦೧೦ | : | ಆಳ್ವಾಸ ನುಡಿಸಿರಿ ಪ್ರಶಸ್ತಿ, ಮೂಡಬಿದರಿ |
| ೨೦೧೧ | : | ನಾ.ಶ್ರೀ. ರಾಜಪುರೋಹಿತ ಪ್ರಶಸ್ತಿ, ರಾಜಪುರೋಹಿತ ಪ್ರತಿಷ್ಠಾನ ಧಾರವಾಡ |
| ೨೦೧೧ | : | ನೃಪತುಂಗ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಬಿ.ಎಂ.ಟಿ.ಸಿ. ಬೆಂಗಳೂರು. |
| ೨೦೧೧ | : | ಬಸವಗುರುಕಾರುಣ್ಯ ಪ್ರಶಸ್ತಿ, ವಿಜಯ ಮಹಾಂತೇಶ್ವರ ಸಂಸ್ಥಾನಮಠ,ಇಲಕಲ್ಲ |
| ೨೦೧೩ | : | ಬಸವಶ್ರೀ ಪ್ರಶಸ್ತಿ, ಬಸವ ವೇದಿಕೆ, ಬೆಂಗಳೂರು |
| ೨೦೧೪ | : | ಸಿದ್ಧರಾಮ ಸಾಹಿತ್ಯ ಪ್ರಶಸ್ತಿ, ನೊಳಂಬ ವೀರಶೈವ ಸಂಘ, ಕಡೂರು |
| ೨೦೧೪ | : | ಶಾಸನ ಸಾಹಿತ್ಯ ಪ್ರಶಸ್ತಿ, ಶ್ರೀ ಕ್ಷೇತ್ರ ಶ್ರವಣಬೆಳಗೊಳಮಠ |
| ೨೦೧೫ | : | ರನ್ನ, ಪ್ರಶಸ್ತಿ, ಕವಿ ಚಕ್ರವರ್ತಿ ರನ್ನ ಪ್ರತಿಷ್ಠಾನ, ಮುಧೋಳ |
| ೨೦೧೪ | : | ರಾಷ್ಟ್ರೀಯ ಬಸವ ಪುರಸ್ಕಾರ, ಕರ್ನಾಟಕ ಸರಕಾರ ಬೆಂಗಳೂರು |
| ೨೦೧೫ | : | ಖೇಣೆದ ಮುರಿಗೆಪ್ಪ ಪ್ರಶಸ್ತಿ ದೇವದುರ್ಗ |
| ೨೦೧೫ | : | ಬಸವಶ್ರೀ ಪ್ರಶಸ್ತಿ ಮರಣೋತ್ತರ ಬೃಹನ್ಮಠ ಚಿತ್ರದುರ್ಗ |

# ಆಕರ ಗ್ರಂಥಗಳು


೧. ಮಾರ್ಗ ಸಂಪುಟ ೧ ರಿಂದ ೭ – ಡಾ. ಎಂ.ಎಂ. ಕಲಬುರ್ಗಿ

೨. ಸಮಗ್ರ ವಚನ ಸಂಪುಟ ೧ ರಿಂದ ೧೫ – ಸಂ. ಡಾ. ಎಂ. ಎಂ. ಕಲಬುರ್ಗಿ

೩. ಏಕೋತ್ತರಶತಸ್ಥಲ – ಡಾ. ಎಂ.ಎಂ. ಕಲಬುರ್ಗಿ, ವೀರಣ್ಣ ರಾಜೂರ

೪. ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ ಡಾ. ಎಂ.ಎಂ. ಕಲಬುರ್ಗಿ

೫. ವಚನ ಸಾಹಿತ್ಯ ಪ್ರಕಟಣೆಯ ಇತಿಹಾಸ – ಡಾ. ಎಂ.ಎಂ. ಕಲಬುರ್ಗಿ

೬. ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿ – ಸಂಪುಟ ೬ ಡಾ. ಎಂ.ಎಂ. ಕಲಬುರ್ಗಿ

೭. ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿ –ಸಂಪುಟ ೧ ಡಾ. ಎಂ.ಎಂ. ಕಲಬುರ್ಗಿ

೮. ಮಹಾಮಾರ್ಗ – ಸಂ. ಡಾ. ವೀರಣ್ಣ ರಾಜೂರ,
ಪ್ರೊ. ಸದಾನಂದ ಕನವಳ್ಳಿ

೯. ಕಲಬುರ್ಗಿ–೬೦ – ಸಂ. ಜಿ.ಎಂ. ಹೆಗಡೆ,
ಡಾ. ಬಾಳಣ್ಣ ಶೀಗಿಹಳ್ಳಿ

೧೦. ಕಲಬುರ್ಗಿ ನೆನಪು – ಸಂ. ಶ್ಯಾಮಸುಂದರ ಬಿದರಕುಂದಿ

೧೧. ಡಾ. ಎಂ.ಎಂ. ಕಲಬುರ್ಗಿ ಸಂಶೋಧನ ಸಾಹಿತ್ಯ – ಸಂ. ಡಾ. ವೀರಣ್ಣ ದಂಡೆ

೧೨. ಮಹಾಮಾರ್ಗದ ರೂವಾರಿ
ಡಾ. ಎಂ.ಎಂ. ಕಲಬುರ್ಗಿಯವರ – ಡಾ. ವೀರಣ್ಣ ರಾಜೂರ

೧೩. ಲಿಂಗಾಯತ ಅಧ್ಯಯನ ಸಂಸ್ಥೆ – ಅನ್ನಪೂರ್ಣ ಹುದ್ದಾರ

೧೪. ವಚನ ಗುಮ್ಮಟ – ಡಾ. ಬಿ.ಎಂ. ಪಾಟೀಲ

೧೫. ಶಿ.ಶಿ. ಬಸವನಾಳ ಜೀವನ ಮತ್ತು ಸಾಹಿತ್ಯ – ಡಾ. ಮಹೇಶ ಚಿಂತಾಮಣಿ

೧೬. ಡಾ. ಆರ್.ಸಿ. ಹಿರೇಮಠರ ವಚನ ಸಂಪಾದನೆ – ಡಾ. ವಿಜಯಕುಮಾರ ಕಟಗಿಹಳ್ಳಿಮಠ



ಆಳ್ವಾಸ್ ನುಡಿಸಿರಿ ಅಧ್ಯಕ್ಷತೆ
ಡಾ. ವೀರೇಂದ್ರ ಹೆಗ್ಗಡೆ, ಸಚಿವ ವಿ.ಎಸ್. ಆಚಾರ್ಯ, ಕಲಬುರ್ಗಿ, ಮೋಹನ ಆಳ್ವಾ, ವೈದೇಹಿ





ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಅಧ್ಯಾಪಕ



ಹೆಂಡತಿ ಉಮಾ ಅವರೊಂದಿಗೆ ಮಾರ್ಗ ಸಲ್ಲಾಪ



ಇಂಗ್ಲಂಡಿನಲ್ಲಿ ಕನ್ನಡದ ಹುಡುಕಾಟ



ಶಾಸನಗಳ ಅಧ್ಯಯನದಲ್ಲಿ



ಯರಗಲ್ಲಿನಲ್ಲಿಯ ಕಲಬುರ್ಗಿಯವರ ಮನೆ



ದಿಲ್ಲಿಯಲ್ಲಿ ಮಾರ್ಗ 4 ಕ್ಕೆ ಕೇಂದ್ರ ಸಾಹಿತ್ಯ ಅಕಾದೆಮಿ ಪ್ರಶಸ್ತಿ
ಅಕಾದೆಮಿ ಅಧ್ಯಕ್ಷ ಗೋಪೀಚಂದ್ ನಾರಂಗ್ ಮತ್ತು ಯು.ಆರ್. ಅನಂತಮೂರ್ತಿ



ಆಳ್ವಾಸ್ ನುಡಿಸಿರಿ ಅಧ್ಯಕ್ಷತೆ
ಕೆ.ಎಸ್. ನಿಸ್ಸಾರ್ ಅಹ್ಮದ್, ಕಲಬುರ್ಗಿ, ಮೋಹನ ಆಳ್ವ, ಚಂದರಶೇಖರ ಕಂಬಾರ



ಕಲಬುರ್ಗಿ ಕುಟುಂಬ
ಪತ್ನಿ, ಮಕ್ಕಳು, ಅಳಿಯಂದಿರು, ಸೊಸೆ, ಮೊಮ್ಮಕ್ಕಳು




ನೃಪತುಂಗ ಸಾಹಿತ್ಯ ಪ್ರಶಸ್ತಿ
ತಾಳ್ತಜೆ ವಸಂತಕುಮಾರ, ಸಚಿವ ಆರ್. ಅಶೋಕ, ಪರಿಷತ್ ಅಧ್ಯಕ್ಷ ನಲ್ಲೂರು ಪ್ರಸಾದ, ಮನು ಬಳಿಗಾರ.



ಬನವಾಸಿಯಲ್ಲಿ ಪಂಪ ಪ್ರಶಸ್ತಿ
ಸಚಿವ ಆರ್.ವಿ. ದೇಶಪಾಂಡೆ, ಸಚಿವೆ ಆರ್. ಲೀಲಾವತಿ ಪ್ರಸಾದ




ಮಾರ್ಗ 6 ಸಂಪುಟ ಬಿಡುಗಡೆ – ಎನ್.ಎಸ್. ತಾರಾನಾಥ, ಷ. ಶೆಟ್ಟರ, ಜಿ. ವೆಂಕಟಸುಬ್ಬಯ್ಯ, ನಿತಿನ್ ಶಾ.



ಕಲಬುರ್ಗಿ ದಂಪತಿಗೆ ಸನ್ಮಾನ
ಸುತ್ತೂರು ಜಗದ್ಗುರು ದೇಶಿಕೇಂದ್ರ ಶಿವಾಚಾರ್ಯರು, ಪ್ರಭುಶಂಕರ, ಮನು ಬಳಿಗಾರ, ಪಿ ನಾಗಣ್ಣ



ಡಾ. ತೋಂಟದ ಸಿದ್ದಲಿಂಗ ಮಹಾಸ್ವಾಮಿಗಳು
ಡಾ. ಕಲಬುರ್ಗಿಯವರನ್ನು ಗೌರವಿಸುತ್ತಿರುವುದು



ಡಾ. ಕಲಬುರ್ಗಿಯವರ ಉಪನ್ಯಾಸ ಶೈಲಿ




ಎಸ್.ಎಂ. ವೃಷಭೇಂದ್ರಸ್ವಾಮಿ, ಜಿ.ಎಸ್. ಶಿವರುದ್ರಪ್ಪ ಅವರೊಂದಿಗೆ



ಈ ಕಾಲದ ಮೂವರು ಸಂಶೋಧನ ದಿಗ್ಗಜರು :
ಕಲಬುರ್ಗಿ, ಚಿದಾನಂದಮೂರ್ತಿ, ವೆಂಕಟಾಚಲಶಾಸ್ತ್ರೀ




ಲಂಡನ್ನಿನ ಬ್ರಿಟಿಷ್ ಲೈಬ್ರರಿಯಲ್ಲಿ – ಅಪರೂಪದ ಕಾಗದಪತ್ರಗಳ ಹುಡುಕಾಟ




ಮಾರ್ಗ 6 ಸಂಪುಟ ಬಿಡುಗಡೆ – ಎನ್.ಎಸ್. ತಾರಾನಾಥ, ಪ. ಶೆಟ್ಟರ, ಜಿ. ವೆಂಕಟಸುಬ್ಬಯ್ಯ, ನಿತಿನ್ ಶಾ.

